Koravanji

# ಕೊರವಂಜಿ

ಆಗಸ್ಟ್ ೧೯೫೧



ಸಂಪಾದಕರು :

ಶ್ರೀ|| ರಾ. ಶಿ.

ಬರಹಗಾರರು :

ಶ್ರೀಮತಿ ಟಿ. ಸುನಂದಮ್ಮ
ಶ್ರೀಮತಿ ಸರೋಜಿನಿ ಆರೂರ್
ಶ್ರೀ|| ದಾಶರಥಿ ದೀಕ್ಷಿತ್.
ಶ್ರೀ|| ಬಚ್ಚ
ಶ್ರೀ|| ಯಜ್ಞಪಶು
ಶ್ರೀ|| ರೇವಣ್ಣ
ಶ್ರೀ|| ಪ್ರಸಾದ್
ಶ್ರೀ|| ಪಾಟೀ[illegible]
ಶ್ರೀ|| ಕಾಮತ್
ಶ್ರೀ|| ಕುಮಾರ್

ಇತ್ಯಾದಿ, ಇತ್ಯಾದಿ.

## ತಿಳಿನಗೆಯ ಮಾಸಪತ್ರಿಕೆ



ಗೋಪಾಲ: (ರೈಲಿನಲ್ಲಿ ತನ್ನ ಜೊತೆಯ ಪ್ರಯಾಣಿಕನನ್ನು ಕುರಿತು) ಏನ್ ಸಾರ್! ಸ್ಟೇಷನ್ ಸ್ಟೇಷನ್ನಲ್ಲಿಯೂ "ಟೀ" ಕುಡಿಯುತ್ತಾ ಬರುತ್ತಿದ್ದೀರಲ್ಲಾ?

ಆತ: ನೋಡೀ ಸಾರ್! ಈ ಪ್ರಯಾಣದಲ್ಲಿ ನೀವು ಎಷ್ಟು ಬಳಲಿದ್ದೀರಿ ಅಲ್ಲವೇ? ನನ್ನ ನೋಡಿದರೆ ಹಾಗೆ ಕಾಣುತ್ತೆಯೋ? ನನ್ನ ಆಯಾಸ ಪರಿಹರಿಸಿ, ನನಗೆ ಶಕ್ತಿ, ಕಳೆ, ಕೊಡುತ್ತಾ ಇರುವುದೇ "ಟೀ"! ಈ "ಟೀ" ಬೇಕೂಂತ ಎಷ್ಟು ಜನ ಹಾತೊರೆಯುತ್ತಾರೆ ಗೊತ್ತೇ! ಅವರಿಗೆಲ್ಲ ಗೊತ್ತು "ಟೀ"ಯ ಬೆಲೆ. ನೀವೂ "ಟೀ" ಕುಡಿದು ನೋಡಿ ಒಂದು ಸಲ. ಆಮೇಲೆ "ಟೀ" ಕುಡಿಯುವುದರಲ್ಲಿ ನನ್ನನ್ನೇ ಮೀರಿಸಿಬಿಡುತ್ತೀರಿ!

# ಟೀ

"ಟೀ" ಎಂದರೇನು? ಅದೊಂದು ಮಧುರವಾದ ಸುಲಭವಾಗಿ ತಯಾರಿಸಬಹುದಾದ, ಎಲ್ಲೆಲ್ಲೂ ದೊರಕುವ, ಸುಲಭ ಬೆಲೆಯ ಪಾನೀಯ. ದೇಹಕ್ಕೆಷ್ಟೇ ದಣಿವಾಗಿರಲಿ. ಅದನ್ನೆಲ್ಲ ಪರಿಹರಿಸಿ, ಬೇಜಾರು ಕಳೆದು, ಉತ್ಸಾಹ ಉಕ್ಕಿಸಿ, ಮನಸ್ಸನ್ನು ತಣಿಸುತ್ತದೆ. ಒಂದು ಕಪ್ "ಟೀ" ಸವಿದು ನೋಡಿರಿ! ಆಗಲೇ ಅದರ ಗುಣ ನಿಮಗೆ ತಿಳಿಯುವುದು.

CTB 38

ಕೇಂದ್ರ "ಟೀ" ಬೋರ್ಡಿನವರಿಂದ ಪ್ರಚುರಪಡಿಸಲ್ಪಟ್ಟಿದೆ




ಸಂಪುಟ ೧೦ | ಆಗಸ್ಟ್ ೧೯೫೧ | ಸಂಚಿಕೆ ೫

# ಕುಹಕಿಡಿಗಳು

★ ★

ಇತ್ತಿಂದೀಚೆಗೆ ನಡೆದ ಸಮಜಾಯಿಶಿಗಳನ್ನು ನೋಡಿದವರು ಇನ್ನು ಮೇಲೆ ಖಾರ್ಂಗ್ರೇಸ್ ಅಂತ ಕರೆಯುವುದು ಚೆನ್ನ ಎಂದರಂತೆ.

* * *

ಕಾಲೇಜುಗಳಲ್ಲಿ ಸೀಟು ಸಿಗದವರೆಲ್ಲಾ ಕೃಪಾಲಿನಿಯವರ ಪಾರ್ಟಿಗೆ ಸೇರುವುದಾದರೂ, ಸಿಕ್ಕವರೆಲ್ಲಾ ಗಾಂಧೀ ಟೋಪಿ ಕೊಳ್ಳುತ್ತಾರೆ ಎನ್ನುವುದು ಸುಳ್ಳಂತೆ.

* * *

"ಒಂದೂಟ ಬಿಡಿ" ಚಳುವಳಿಗೆ ಎರಡೂಟ ಸಿಗದವರೆಲ್ಲಾ ಸಂತೋಷದಿಂದ ಸಹಿ ಹಾಕಿದರಂತೆ.—

* * *

ಕುಂಭಕೋಣದ ರಸ್ತೆ ಮಧ್ಯೆ ಬೇಜವಾಬ್ದಾರಿಯಿಂದ ಅಡ್ಡಾಡುತ್ತಿದ್ದವರನ್ನು ಪೋಲೀಸಿನವರು ಕಸದ ಲಾರಿಯಲ್ಲಿ ಠಾಣೆಗೆ ಕೊಂಡೊಯ್ದು ಬುದ್ಧಿ ಹೇಳಿದರಂತೆ

ಲಾರಿ ತಡೆಯಿತೇ ಈ ಕುಂಭ-ಕೋಣಗಳನ್ನು !

ಈ ಸಾರಿಯ ಅಧಿವೇಶನದಲ್ಲಿ ಅನುಮೋದಿಸಲ್ಪಟ್ಟ ಠರಾವುಗಳೆಲ್ಲವೂ ಸ್ಲೇಟಿನ ಮೇಲೆ ಬರೆಯಲ್ಪಡಲಿಲ್ಲವಂತೆ.

* * *

ಕಾಶ್ಮೀರದ ಜ್ಯೋತಿಷ್ಕರು ಹೊಸ ನಾಣ್ನುಡಿ ರಚಿಸಿದ್ದಾರಂತೆ.

—"ಜಾ ಮಾತಾ ದಶಮ ಗ್ರಹಾಂ"—

* * *

ಸರಸ್ವತಿಯನ್ನು ಕಾಶ್ಮೀರ ಪುರವಾಸಿನಿ ಎಂದು ನಾವು ಅಂದಿನಿಂದ ಹೇಳುತ್ತಿದ್ದೇವಾದ್ದರಿಂದ ಕಾಶ್ಮೀರವು ನಮ್ಮದೇ ಎಂದು ಮಹಾ ಸಭೆಯವರು ಯೂನೋಗೇ ಸ್ಪಷ್ಟೀಕರಿಸಿದ್ದಾರಂತೆ.

* * *

ಆಂಗ್ಲೋ ಹುಣ್ಣಿಗೆ ಕನ್ನಡ ಬೇಕೆ? ಹಿಂದಿ ಸಾಲದೆ ಎಂದು ವಾಚಕರೊಬ್ಬರು ಬರೆದಿದ್ದಾರೆ, ದೆಹಲಿಯಿಂದ.

* * *

ನಂದೀಗೆ ಹೋದ ನಾಯಕರು ಹಲವರು ಗಾಂಧೀಜಿ ಇದ್ದ ಕುಟೀರವನ್ನು ನೋಡಿ ಅತ್ತರಂತೆ.

—ಇದು ವಿನಿಮಯ ಅಲ್ಲವೇ! ಇವರನ್ನು ನೋಡಿ ಗಾಂಧೀಜೀಯು ಕಣ್ಣೀರು ಸುರಿಸಿದ್ದಿರಬೇಕು!!

* * *

ಎ. ಐ. ಸಿ ಸಿ. ಸಭೆ ಸೇರಿದಾಗ ಒಂದು ಖೆಡ್ಡಾ ಏರ್ಪಡಿಸಿದ್ದರೆ ಎಷ್ಟು ಚೆನ್ನಾಗಿರುತ್ತಿತು ಎಂದು ಒಬ್ಬರು ಹೇಳಿದರಂತೆ.

—ಬಲೀಗೆ ಹಾಕುವುದಕ್ಕೆ ಯಾವುದಾದರೆ ಏನು? ಅಂತ ಒಬ್ಬರು ಉತ್ತರ ಹೇಳಿದರಂತೆ.

* * *

ಲಿಯಾಕತ್ ಅಲಿಖಾನರವರು ಶರಣಾರ್ಥಿ ಎಂದು ಕೈಮುಗಿದಾಗ, ಕಂಕುಳಲ್ಲಿದ್ದ ದೊಣ್ಣೆ ಕಾಣಿಸಲಿಲ್ಲವಂತೆ, ಶ್ರೀ ಗ್ರಹಾಂರವರಿಗೆ.

* * *

ಶ್ರೀ ನೆಹ್ರೂ ಅವರು ೧೭ಕ್ಕೆ ದೆಹಲಿ ತಲಪಿದರು.

ಶ್ರೀ ಟಾಂಡನ್‌ರವರು ೧೮ಕ್ಕೆ ಅಮೋಘ ಭಾಷಣ ಮಾಡಿದರು.

(ಪಕ್ಕಪಕ್ಕದ ಸುದ್ದಿ)

* * *

ಈ ಕಾಲದಲ್ಲಿ:—ಒಪ್ಪತ್ತುಂಡವ ಭೋಗಿ, ಎರಡು ಹೊತ್ತುಂಡವ ರೋಗಿ, ಮೂರ್ಹೊತ್ತುಂಡವನನ್ನು ಪೋಲೀಸಿನವರು ಹಿಡಕೊಂಡು ಹೋಗಿ!

# ಉರಿಗಾಳು

ಕರ್ನಾಟಕ ಏಕೀಕರಣ ಪ್ರಿಯರು ಕೂಡಲೇ ಗಡಿ ಪ್ರದೇಶಗಳಲ್ಲಿ ತೀವ್ರ ಚಳುವಳಿ ಹೂಡಬೇಕಾಗಿದೆ (ಭಾಷಣ) ಗಡಿ-ಬಿಡಿ ಎಂದರಾಯಿತು, ಅಲ್ಲವೆ?

* * *

ದುಡಿದು ದುಡಿದು ಸಂಪಾದನೆಯನ್ನು ಹೆಚ್ಚಿಸಿಕೊಳ್ಳುವುದೇ ನಮಗುಳಿದಿರುವ ಒಂದೇ ಉಪಾಯ (ಲೇಖನ) ಹೌದು, ಆದರೆ ಯಾರು ದುಡಿಯಬೇಕು, ಯಾರು ಸಂಪಾದಿಸಬೇಕು, ಎನ್ನುವುದೇ ಪ್ರಶ್ನೆ.

* * *

ಕಾಲೇಜುಗಳಲ್ಲಿ ಸೀಟಿಲ್ಲ ಎಂಬ ಕೂಗಿಗೆ ಬಸ್ ಕಂಡಕ್ಟರುಗಳ ಸಂಘದ ಸಮಾಧಾನ ಯೋಚನಾರ್ಹವಾಗಿದೆ : "'ಸ್ಟ್ಯಾಂಡಿಂಗ್ ಸೀಟ್' ಹೆಚ್ಚಿಸಿ."

* * *

"ತೆಲಂಗಾಣ ಒಪ್ಪಂದ" (ಶಿರೋನಾಮೆ) ತೆಲಂಗಾಣದಲ್ಲಿ ಇದುವರೆಗೂ ಹತರಾದವರನ್ನು ಹೇಗೋ ಒಪ್ಪಮಾಡುತ್ತಿದ್ದರು, ಇನ್ನು ಅದರಲ್ಲಿ ಅಂದ ಬೇರೆಯೆ?

* * *

"ಇಂದು ರಾತ್ರಿ ಇಲ್ಲಿ ಕಗ್ಗತ್ತಲಿನ ಪ್ರಯೋಗ ನಡೆಯಿತು" (ಕರಾಚಿ ಸುದ್ಧಿ) ಅಂದರೆ, ಮಂತ್ರಿ ಮಂಡಲದ ಸಭೆ ನಡೆಯಿತು, ಎಂಬರ್ಥವೆ?

* * *

ಪರೀಕ್ಷೆಗಳಲ್ಲಿ ಸೋತವರನ್ನೆಲ್ಲ ಗೆದ್ದವರಂತೆಯೇ ಭಾವಿಸಲಾಗುವುದು (ಸುದ್ದಿ) ಅಂದರೆ, ಸೋತವರು ಯಾರು? ಎಂದು ಮಹಾಜನಗಳು ಕೇಳುತ್ತಿದಾರೆ.

* * *

ಮಧ್ಯಾಹ್ನದ ಸಭೆಯಲ್ಲಿ ಗ್ರಾಮ ಕೈಗಾರಿಕೆಗಳ ವಿಷಯವಾಗಿ ಸುದೀರ್ಘ ಚರ್ಚೆ ನಡೆಯಿತು. ಚರ್ಚೆಯೇ ನಮ್ಮ ಗ್ರಾಮಗಳ ಅತೀ ಮುಖ್ಯ ಕೈಗಾರಿಕೆ ಹೌದು.

* * *

"ಜಪಾನ್ ಶಾಂತಿಯ ಕರಡಿಗೆ ಫಿಲಿಪ್ಪೈನ್ಸ್ ಒಪ್ಪಿಗೆ ಇಲ್ಲ" (ಶಿರೋನಾಮೆ) ಕರಡಿ ಎಂದ ಕೂಡಲೇ ಅವರಿಗೆ ರಷ್ಯದ ಭಯ ಉಂಟಾಯಿತೋ, ಏನೊ?

* * *

"ಮುಂದಿನ ಚುನಾವಣಾ ಕಾಲದಲ್ಲಿ ಚಿನ್ನ ಯಾವುದು, ಹಿತ್ತಾಳೆ ಯಾವುದು ಎಂದು ಒರೆ ಹಚ್ಚಿ ನೋಡಿ" (ಭಾಷಣ) ದಿನ ದಿನದ ಪಾತ್ರೆ ಪದಾರ್ಥ ಗಳಿಗಾಗಿ ಹಿತ್ತಾಳೆಯನ್ನೇ ಆರಿಸಿ, ಎಂದರ್ಥ.

* * *

"ದೇಶಾವರಂ ನಂ. ೧, ೫೩ ರೂ. ದೇಶಾವರಂ ನಂ. ೨, ೫೯ ರೂ." (ಪತ್ರಿಕೆ) ಏಕೆ? ಉತ್ತಮವಾದ ದೇಶಾವರ ನಗೆಯಿಂದ ಸಾವಿರಾರು ರೂ. ಗಿಟ್ಟಿ ಸಿದವರನ್ನು ನಾವು ಬಲ್ಲೆವು.

* * *

೧೯೪೬ರಲ್ಲಿ ಒಬ್ಬ "ಗ್ಯಾಂಗ್‌ಮನ ಸಂಬಳ ೧೦ ರೂ. ಈಗ, ಅವನಿಗೆ ೩೦ ರೂ. ಸಂಬಳ, ४೫ ರೂ. ತುಟ್ಟಿ ಭತ್ಯ" (ವರದಿ) ಅದಕ್ಕೇ ಇರಬೇಕು, ಎಲ್ಲೆಡೆ ಗಳಲ್ಲೂ ಈಗ ಗ್ಯಾಂಗು ಹೆಚ್ಚುತ್ತಿರುವುದು.

* * *

ಭಾರತವೆಲ್ಲ ಈಗ ಯುದ್ಧಕ್ಕೆ ವಿರೋಧವಾಗಿ ನಿಂತಿದೆ (ಅಲಿ ಜಹೀರ್) ಭಾರತೀಯರಿಗೆ ಈಗ ಬೇಕಾಗಿರುವುದು ಕೋಮುವಾರೊಂದೇ.

* * *

ಆಹಾರ ಧಾನ್ಯ ಸಾಗಿಸಲು ರೈಲ್ವೆ ನೌಕರರು, ಎಂಥ ಮುಷ್ಕರ ಕಾಲ ದಲ್ಲೂ, ಸಿದ್ಧವಾಗಿದ್ದಾರೆ. (ಜೆ. ಪಿ. ನಾರಾಯಣ್) ಇಲ್ಲದಿದ್ದರೆ, ಅವರಿಗೆ, ಪಾಪ, ಆಹಾರಧಾನ್ಯ ಸುಲಭವಾಗಿ ಸಿಗುವುದು, ಹೇಗೆ?

* * *

ವಕೀಲರು ಸರಿಯಾದ ಕಾನೂನುಗಳು ತಯಾರಾಗುವಂತೆ ಸರ್ಕಾರ ದೊಂದಿಗೆ ಸಹಕರಿಸಿ, ತಮ್ಮ ಕರ್ತವ್ಯವನ್ನು ಪಾಲಿಸಬೇಕು (ಕೃಪಲಾನಿ) ಅಂದರೆ ತಮ್ಮ ಅನ್ನಕ್ಕೆ ತಾವೇ ಕಲ್ಲುಹಾಕಿಕೊಳ್ಳಬೇಕು.

* * *

ಅಮೇರಿಕಾದ ಬಫೆಲೊ ಎಂಬ ಊರಲ್ಲಿ ಸಂಜೆ ೬-೫೦ರ ಮೇಲೆ, ಕ್ಷೌರ ದಂಗಡಿಗಳನ್ನೆಲ್ಲ ಬಂದುಮಾಡಬೇಕಂತೆ.... ಬ್ಲಾಕ್ ಮಾರ್ಕೆಟ್ ತಪ್ಪಿಸಲು ಇದು ಒಂದು ಮಾರ್ಗ.

# ಕೊರವಾವಲೋಕನ

ಸಾರ್ವಜನಿಕ ಪುಸ್ತಕ ಭಂಡಾರದಲ್ಲಿ, ಒಳ್ಳೇ ಪುಸ್ತಕದೊಳಗಿನ ವರ್ಣ ರಂಜಿತ ಚಿತ್ರವನ್ನು ಕದ್ದು ಹರಿಯುವಾಗ, ಸಿಕ್ಕಿಹಾಕಿಕೊಂಡರೆ ಮುಖ ಹೇಗಿರುತ್ತೆ ನೋಡಿ! ಹಾಗಿತ್ತು ಕೊರವನ ಮುಖ ಕ್ಲಬ್ಬಿಗೆ ಬಂದಾಗ.

'ಯಾಕಯ್ಯಾ! ಏನು ಮಾಡುವಾಗ ಸಿಕ್ಕಿಹಾಕಿಕೊಂಡೆ. ಸ್ವಲ್ಪ ಹಿಂದೂ ಮುಂದೂ ನೋಡಿಕೊಂಡು ಅಂತಹ ಕೆಲಸ ಮಾಡಬಾರದೆ' ಎಂದೆ.

'ನಾನಲ್ಲಯ್ಯಾ ಮಾಡಿದ್ದು! ಆದರೆ ಫಲ ಅನುಭವಿಸೋನು ನಾನು' ಎಂದ.

ಹುಬ್ಬೆತ್ತಿದೆ, ನೋಡಿದೆ. ಅತ ವಿಶದೀಕರಿಸಿದ.

ನೋಡು! ನಿನ್ನೆ ವಾಸವೀಧರ್ಮಶಾಲೆಯಲ್ಲಿ ರಾಷ್ಟ್ರ ನಾಯಕರ ಸಹ ಪಂಙ್ತ್ತಿ ದೊರೆಯಿತು, ನಮ್ಮ ಸೇವಾದಲದ ಮುಖಾಂತರ. ಅದೇನು ಚೊಕ್ಕ ಭೋಜನ ಅಂತೀ! ಗುಜರಾಥಿ ಊಟ ಪಂಜಾಬಿ ಪರೋಟ, ಬಂಗಾಲ ರಸ ಗುಲ್ಲ, ಕೇರಳದ ನಾರೀ ಕೇಳಿದ ಚಟ್ನಿ, ಆಂಧ್ರರ ಆವುಕಾಯಿ, ದೆಹಲಿಯ ಮಿಠಾಯಿ, ಬಲು ಸೊಗಸಾಗಿತ್ತು. ವಾರಕ್ಕಾಗೋ ಅಷ್ಟು ತಿಂದೆ. ಮುನ್ನಿಯವರಿಗೆ ನನ್ನ ಸವಾಲು ಅದು. ವಾರಕ್ಕೊಂದು ಊಟ ಬಿಡಿ ಅನ್ನುವ ಬದಲು, ವಾರಕ್ಕೊಂದು ಇಂಥ ಊಟ ಮಾಡಿ ಅಂದರೆ ಎಲ್ಲರೂ ಮಾಡುತ್ತಾರೆ.

'ಹಾಗಾದರೆ ಈ ಮುಖ ಏಕೆ ಇವತ್ತು!' ಅಂದೆ.

'ಅದೇ ಹೇಳುಕ್ಕೆ ಬರುತ್ತಾ ಇದ್ದೆ. ಈ ಊಟ ಈ ಸಂತೃಪ್ತಿ ಕಂಡ ಕೇಂದ್ರದವರು ನಿಮ್ಮೂರಲ್ಲಿ ಆಹಾರ ಕೊರತೆ ಏನು ಬಂತು ಎಲ್ಲಾ ಸುಳ್ಳು ಅಂತ ಇರೋ ರೇಷನ್ನಿಗೂ ದಿಟವಾಗಿಯೂ ಕಲ್ಲು ಹಾಕಿದರೆ—ಮುಂದೆ ನಮ್ಮ ಭವಿಷ್ಯ!'

ಎಂದು ತಲೆ ಮೇಲೆ ಕೈಯಿಟ್ಟುಕೊಂಡ.

ಹೌದಾ! ಅಂತ ನಾನೂ ಅವನಂತೇ ಕುಳಿತೆ.

* * *

'ಯಾಕೋ! ಬರಲಿಲ್ಲ ಟೌನ್‌ಹಾಲಿಗೆ' ಅಂತ ಬೆನ್ನು ಗುದ್ದಿದ ಕೊರವ. ತುಟಿಯಲ್ಲಿದ್ದ ಸಿಗರೇಟು ಷರಾಯಿಮೇಲೆ ಬಿತ್ತು. ಅದನ್ನು ತೆಗೆದು ಕೊಡವಿ

ಕೊಂಡು, ಟೌನ್‌ಹಾಲಿನಲ್ಲಿ ಏನು ನಿನಗೆ ಶಾಂತಿ ಮಾಡಿದರೇ! ಎಂದಿ ರೇಗುತ್ತಾ

'ಅಲ್ಲವೊ ಕನ್ನಡಮ್ಮನ ಕೂಸು! ಅಲ್ಲಿ ಕನ್ನಡ ಪ್ರಾಂತ ರಚನಾ ಸಮ್ಮೇಳನ ನಡೆಯಿತು. ಎಲ್ಲಾ ಪ್ರಾಂತಗಳವರೂ ಬಂದಿದ್ದರು ಸೊಗಸಾಗಿ ನಡೆಯಿತು. ನೀನು ಬಾರದಿದ್ದುದರ ಕಾರಣ?' ಅಂದ.

'ಕಾರಣ ಗೊತ್ತಿಲ್ಲವೇ! ಕಾಸೇ ಕಾರಣ! ಅದು ಹಾಗಿರಲಿ, ಕನ್ನಡಿಗರೆಲ್ಲರಿಗೂ ಪ್ರಾಂತ ಬೇಕೆ ಬೇಕೆಂದು ಸಭೆ ಏಕೆ? ಕನ್ನಡ ಗೊತ್ತು ಆದರೆ ಇತರ ಪ್ರಾಂತಗಳವರಿಗೆ ಇದನ್ನು ಮನದಟ್ಟುವಂತೆ ಮಾಡಬೇಕು. ಅದಕ್ಕೋಸ್ಕರ ಈ ಸಮ್ಮೇಳನ ನ್ಯಾಯ. ಆದರೆ ಯಾವ ಭಾಷೇಲಿ ಮಾತನಾಡಿದರು ಎಲ್ಲರೂ! ಹೇಳು' ಅಂದೆ

'ಕನ್ನಡ, ಇಂಗ್ಲಿಷ್' ಅಂದ ಕೊರವ.

"ಅದೇ ತಪ್ಪು ನೋಡು ಹಿಂದಿಯಲ್ಲೇ ಭಾಷಣ ಮಾಡಿದ್ದರೆ ಲಾಂಡನ್ ತನಕ ಕೂಗು ಮುಟ್ಟುತ್ತಿತ್ತು. ಈಗ ನೋಡು ಇದೆಲ್ಲಾ ನೀರಿನ ಹೋಮದಂತೆ" ಅಂದೆ.

ಆಗ ಕೊರವ ತಿರುಗಿ ಗಲ್ಲದಮೇಲೆ ಬೆರಳಿಟ್ಟು ಕೂತ.

* * *

ಕಣ್ಣಿನ ಸುತ್ತಲೂ ಕಾಗೆ ಕಾಲು ಆಡಿಸಿದಂತೆ ಕಾಣಿಸಿತು, ಕೊರವನ ಮುಖದ ಮೇಲೆ. "ಯಾಕೋ ಏನು ಬೇನೆ ಕಣ್ಣಿಗೆ" ಎಂದೆ, ಕಪ್ಪೆ ಹಾವಿನ ದೇಹಸ್ಥಿತಿ ವಿಚಾರಿಸೋಹಾಗೆ—ಸೌಜನ್ಯದಿಂದ—

"ರಸ್ತೇಲಿ ಬರ್ತಾ ಬರ್ತಾ ಬೋರ್ಡುಗಳನ್ನು ಓದಿದೆ. ಅದಕ್ಕೇ ಕಣ್ಣು ಕೋರೈಸಿ ಹೋಗಿ ಕಿರುಗಣ್ಣಾಯ್ತು." ಅಂದ.

ತಲೆ ಆಡಿಸಿದೆ,—ಅಲ್ಲಾಡಿಸಿದೆ.—ಅರ್ಥವಾಗಲಿಲ್ಲ ಅಂತ.

'ಭಾರತ ಮಾತಾ ಹೇರ್ ಕಟಿಂಗ್ ಸೆಲೂನ್ ಅಂತ ಬೋರ್ಡು ಕಣೋ. ತಾಯಿ ತಲೆ ಬೋಳಿಸಿದರೂನೂ ಹಾಗೆ ಬಹಿರಂಗವಾಗಿ ಹೇಳಿಕೊಳ್ಳಬೇಕೇ? ಅದರ ಬದಲು ಗುಂಬಸ್ ಹೇರ್ ಕಟಿಂಗ್ ಸೆಲೂನ್ ಅಂದರೆ ಬೋಳ ಗುಂಬಸಿನ ನೆನಪಾಗಿ, ಓಹೋ! ಹೀಗೋ! ಅಂತ ಅನ್ನಿಸುಲ್ಲವೇ? ಅಥವಾ ಬೋಳಾಜಿ ಆಯುಷ್ಕರ್ಮ ಶಾಲೆ' ಎಂದರೆ ತಿರುಪತಿಯ ಸೌಭಾಗ್ಯ ಮನದ

ಮುಂದೆ ಬರುಲ್ಲವೇ?. ಕಂತಿನ ಪ್ರಕಾರ ಚೌರಕ್ಕೆ ಇಲ್ಲಿ ಅನುಕೂಲ ಅಂಥ ಅರ್ಥವಾಗುಲ್ಲವೇ? ಅಥವಾ ಕನ್ನಡಿ ಕ್ಷೌರ ಮಂದಿರ ಎಂದರೆ ಎಷ್ಟು ಚೆನ್ನ! ಭಟ್ಟ ತಲೆಯುವರನ್ನು ಕೈ ಬೀಸಿ ಕರೆದಂತಾಗುಲ್ಲವೇ! ಎಲ್ಲಾ ಬಿಟ್ಟು ಈ ಹೆಸರು ಇರಬಹುದೇನೋ! ಎಂದ.

—ತಲೆ ಕೆರೆದುಕೊಂಡೆ. ಇದ್ದ ಎರಡು ಬಿಳಿ ಕೂದಲೂ ಕೈಗೆ ಬಂತು.

*          *          *

ಕ್ಲಬ್ಬಿನ ಹೊರಗಡೆ ದೊಡ್ಡದಾದ ಒಂದು ಪೋಸ್ಟರ್ ಹಾಕಿದ್ದರು. 'ಹೆಚ್ಚು ಆಹಾರ ಬೆಳೆಯಿರಿ' ವಿಷಯದ್ದು. ನೇಗಿಲ ಯೋಗಿಯ ಹಿರಿಮೆಯನ್ನು ಸೂಚಿಸುವಂಥಾದ್ದು. ನೋಡಿದವರ ಮನಸ್ಸನ್ನು ಸೆಳೆಯುವಂತಹ ಸೊಗಸಾದ ಕಮರ್ಷಿಯಲ್ ಕಲಾಕೃತಿ.

"ನೋಡಿದೆಯಾ! ಕೊರವ! ಏನು ಸೊಗಸಾದ ಪೋಸ್ಟರು ಅದು. ನನಗೇನೋ ನಾಳೆಯಿಂದ ನೇಗಿಲು ಹಿಡಿಯೋಣ ಒಂದು ಅರ್ಧ ಗಂಟೆ ಅನ್ನಿಸುತ್ತಿದೆ" ಎಂದೆ.

'ಸುಮ್ಮನಿರೋ ಭಕ್ರಾ! ಅದೆಲ್ಲಾ ಮಾರೀಚನಂತೆ ಮಾಯಾ ರೂಪಿಯ ಪೋಸ್ಟರು. ಮನಸೆಳೆದು ನಿನ್ನ ಹಾಳುಮಾಡಿಬಿಡುತ್ತೆ! ನಿನಗೆ ರಾಮಾಯಣ ಗೊತ್ತೋ! ಇಲ್ಲವೋ!" ಅಂದ.

'ಎಲಾ! ಇವನ! ನನಗೇ ಗೊತ್ತಿಲ್ಲವೇ ರಾಮಾಯಣ!! ರಾಮರಾಯ ಅಂತ ಹೆಸರಿಟ್ಟು ಕೊಂಡವನಿಗೇ! ಜಾನಕೀಬಾಯಿ ಗಂಡನಿಗೆ, ಮೊದಲ ಸಾರಿಗೇ ಅವಳಿ ಜವಳೀಗೆ ತಂದೆಯಾದ ನನಗೆ, ಒಂದು ಕಾಲಕ್ಕೆ ಒಂದರಂತೆ, ಮಲತಾಯಿಗಳಿದ್ದ ನನ್ನನ್ನೇ ಹೀಗೆ ಕೇಳುತ್ತಾನೆ ಅಂತ ತಾತ್ಸಾರದಿಂದ ಅಂದೆ- ವಾಲ್ಮೀಕಿ ರಾಮಾಯಣ ದಿನಾಲೂ ಪಾರಾಯಣ ಇಲ್ಲದೇ ಊಟ ಮಾಡುಲ್ಲ" ಅಂತ.

"ಹಾಗಾದರೆ! ನೇಗಿಲ ಯೋಗ್ಯತೆ ಗೊತ್ತಿಲ್ಲವೇ! ದೇವರೇ ಅಂತಿದ್ದ ರಾಜಋಷಿ ಜನಕಮಹಾರಾಯ, ಹೆಣ್ಣುಮಕ್ಕಳಿಲ್ಲದೇ ಸುಖವಾಗಿದ್ದ. ಆ ಜನಕ ಮಹಾರಾಯನಿಗೆ ಈ ನೇಗಿಲ ಹುಚ್ಚು ಆ ಕಾಲದಲ್ಲೂ ಹಿಡಿಯಿತು. ಅವನೂ ಅವನ ಯೋಗ್ಯತೆಗೆ ತಕ್ಕ ಹಾಗೆ ಚಿನ್ನದ ನೇಗಿಲು ಹಿಡಿದ. ಉತ್ತ. ಉತ್ತರ ಗೊತ್ತೇ! ಅಲ್ಲೊಂದು ಹೆಣ್ಣುಮಗು ಸಿಕ್ಕಿತು. ಆ ಮೇಲೆ ನೋಡು ಅವನ ಜೀವನವೇ ಖರಾಬಾಯ್ತು. ಮಗಳ ಮದುವೆ ಹೇಗೆ ಮಾಡೋದು, ಅಳಿಯ ಎಲ್ಲಿ ಸಿಕ್ತಾನೇ! ಅಂತ ಕಂಡ ಕಂಡ ಧಾಡೀ ಋಷಿಗಳಿಗೆಲ್ಲಾ ಕೈ

ಮುಗಿಯುವಂತಾಯ್ತು. ಜಾಹೀರಾತು ಮಾಡಿಗ ಜಾತಕಬವರಿಗೆಲ್ಲಾ ಸುಂಕ ತೆತ್ತ. ಕಡೇಗೆ ಅವನ ಮಗಳು ಅನುಭವಿಸಿದ್ದನ್ನು ಕಂಡಿದ್ದೀಯಲ್ಲಾ! ಅರಣ್ಯದಲ್ಲಿ ಕ್ಯಾಂಪ್ ವಾಸ—ಅಶೋಕ ಮರದ ಕೆಳಗೆ ಶೋಕ ಜೀವನ - ಹೆರೋ ಕಾಲಕ್ಕೆ ಸ್ಥಳವಿಲ್ಲದೆ ಕಾಡಿಗೆ ಹೋದದ್ದು—ಇತ್ಯಾದಿ ಇತ್ಯಾದಿ.

—ಮಗನೇ! ಕೇಳು! ನೇಗಿಲ ತಂಟೆಗೆ ಹೋಗಬೇಡ. ನೀನು ನೇಗಿಲ ಹಿಡಿದು ಉತ್ತರೆ ಭೂಮಿಯಿಂದ ಚಿಮಣಿ ಎಣ್ಣೆ ಬುಸ್ ಎಂದು ಎದ್ದು ಬರಬಹುದು! ಅಷ್ಟೇ!" ಅಂದ.

ಹಾಗಾದರೆ ನಿನ್ನ ಬಾಯಿಗೆ ಸಕ್ಕರೆ ಹಾಕ್ತೀನಿ! ನಾಳೇನೆ ನೇಗಿಲು ಹಿಡೀತೀನಿ. ಚಿಮಣಿ ಎಣ್ಣೆ ಭುಗ್ಗೆಂದು ಬಂದರೆ, ನಾನೂ ನೀನೂ, ನಮ್ಮ ದೇಶಾನೇ ಉದ್ಧಾರ ಆಗಿ ಹೋಗುತ್ತೆ" ಎಂದು ಮನಸ್ಸಿನಲ್ಲಿಯೇ ಮುಂಡಿಗೆ ಮೆಲ್ಲುತ್ತಿದ್ದೆ.






:—"ವಿಸಲ್ ಹಾಕಿ ನಾಯಿ ಕರಿಬೇಕೋ ಮುಂದೋಗ್ತಿಯೋ!

:—ಹಾಗಾದರೆ ಈ ವಿಷಲ್ ಮಾರೋದಿಕ್ಕೆ ಅವಕಾಶ ಕೊಡಿ ಸ್ವಾಮಿ!!

# ಬಿಸಿನೆಸ್

ಮಾರ್ನಿಂಗ್ ಷೋಯಿಂದ ಹೊರಬಿದ್ದಾಗ ನೋಡಿದ್ದು ನಾನವಳನ್ನ. ನೋಡಿದೆ, ಅವಳೇ ಅಂದುಕೊಂಡೆ, ಆದರೂ ನಂಬಿಕೆ ಆಗಲಿಲ್ಲ. ಸರಿಗೆ ಸೀರೆ, ಸವರ್ನ ಸರ, ಸೀಮೇ ಕಮಲದ ಓಲೆ, ನೋಡಿ ಸ್ವಲ್ಪ ಹೆದರೇ ಹೆದರಿದೆ, ಅನುಮಾನಿಸಿದೆ! ನಾವಿಬ್ಬರೂ "ಲಂಗಾಗೆಳತಿಯರು"; ಎಷ್ಟೋ ಕೂಡಿ ಆಡಿ, ನಕ್ಕು ನಗೆದು, ಹೊಡೆಸಿ ಒದೆಸಿಕೊಂಡವರು! ಆದರೂ ಆ ಬಿಟ್ಟಂಚಿನ ನೂಲು ಸೀರೆ, ಬೊಂಬಾಯಿ ಗಾಜಿನ ಬಳೆ, ಬರಿಗಿವಿಯ ಸೀತಾಲಕ್ಷ್ಮಿ ಈಗ....ಹೇಗೆ....?

"ಗುರುತಾಗಲಿಲ್ಲವೇ ಸಾತೂ?" ಅವಳೇ ಮಾತನಾಡಿಸಿದಳು.

"ಸೀತಾಲಕ್ಷ್ಮಿ ಅಲ್ಲವೇ?... ಚೆನ್ನಾಗಿದ್ದೀಯಾ?...."

ಎಷ್ಟು ಮಕ್ಕಳು, ಎಲ್ಲಿದ್ದೀ, ಹೇಗಿದ್ದೀ, ಯಜಮಾನ್ರಿಗೇನು ಸಂಬಳ, ಮೇಲ್ವರಮಾನವೆಷ್ಟು—ಎಲ್ಲಾ ಪರಸ್ಪರ ವಿಶದೀಕರಣವಾಯಿತು.

"ಯಜಮಾನ್ರಿಗೇ... ಯಾಲಕ್ಕಪ್ಪಾಚಾರೀ ಅಂಗ್ಡೀಲಿ ಲೆಖ್ಖಾ ಬರೀತಾರೆ" ಅಂದಳು ಸೀತು. ಕಕ್ಕಾಬಿಕ್ಕಿಯಾಗಿ ನಿಂತಿದ್ದ ನನ್ನ ಪೆಚ್ಚುಮೋರೆ ನೋಡಿ, "ಆಶ್ಚರ್ಯ ಅಲ್ಲವೇ ನಿನಗೆ ಅಂಗ್ಡೀ ಲೆಖ್ಖಾ ಬರೆಯೋನ್ನ ಕೈಹಿಡಿದು ಹೀಗೆ ಷೋಕ್ ಆಗಿದಾಳಲ್ಲಾಂತ! ನಾನು ಬಿಸಿನೆಸ್ ಮಾಡ್ತೀನಿ ಸಾತೂ!" ಸೀತಾ ನಗುತ್ತಾ ಹೇಳಿದಳು.

ಬಿಸಿನೆಸ್! ಸೀತಾಲಕ್ಷ್ಮೀನೂ ಬಿಸಿನೆಸ್! ಈಗೇನೋ ಯಾರನ್ನ ನೋಡಿದರೂ, ಯಾರನ್ನ ಕೇಳಿದರೂ ಬಿಸಿನೆಸ್ಸು, ಬೊಂಬಾಯಿ, ಬುಕಿಂಗ್, ಪ್ಲೈಯಿಂಗು—ಅದೊಂದು ಸ್ಟೈಲು ಆಗ್ಹೋಗಿದೆ! ಆದ್ರೂ....ಹೆಣ್ಣೆಂಗ್ಸು.... ಇವಳೂ ಬಿಸಿನೆಸ್ ಅಂದ ಮೇಲೆ ನನಗೇಕೋ ತಲೆ ತಿರುಗಿದಂತಾಯ್ತು!

"ಬಾ, ಹೀಗೇ ನಮ್ಮಾಫೀಸಿಗೆ" ಎಂದು ಕರೆದುಕೊಂಡು ಹೋದಳು. ನಾಲ್ಕನೇ ರೋಡಿನಲ್ಲಿ ನಾಜೂಕಾದ ಮನೆ, ಪುಟ್ಟ ಹೂದೋಟ, ಮನೆಯ ಮುಂದೆ "ಅನ್ನಪೂರ್ಣಾ ಏಜೆನ್ಸೀಸ್" ಎಂಬ ಬೋರ್ಡು! ಹೊರಗಿನ ಕೊಠಡಿಯಲ್ಲಿ ಒಂದು ಮೇಜು, ಒಂದೆರಡು ಕುರ್ಚಿಗಳು ಇದ್ದುವು. ನಾಲ್ಕೈದು

ಹೆಂಗಸರು ಕುಳಿತಿದ್ದವರು ನಾವು ಪ್ರವೇಶಿಸಿದ ಕೂಡಲೇ ಎದ್ದು ನಿಂತು ಕೊಂಡರು. ನನ್ನನ್ನೊಂದು ಕುರ್ಚಿಯಲ್ಲಿ ಕೂರಿಸಿ ಸೀತಾಲಕ್ಷ್ಮಿ ತಾನೂ ಕೂತುಕೊಂಡಳು. ಆ ಹೆಂಗಸರನ್ನುದ್ದೇಶಿಸಿ, "ಏನು, ಏನ್ಸಮಾಚಾರ?.... ನಿನಗೆ ಹೇಳಿದ್ದದ್ದು....ಆ ಮ್ಯಾಜಿಸ್ಟ್ರೇಟರ ಮನೇದು ಏನಾಯ್ತು?....ನಿನಗೇ ನಾಗಬೇಕು, ಬಡ್ತಿ ಸಿಕ್ಕಿತು ತಾನೇ?....ಇತ್ಯಾದಿ ಒಬ್ಬೊಬ್ಬರನ್ನೇ ವಿಚಾರಿಸಿ ದಳು. ಒಬ್ಬಾಕೆ, "ತಾಯೀ, ನನಗೆ ಶಂಕರಪುರಕ್ಕೆ ವರ್ಗಮಾಡಿಸಿಕೊಡ ಬೇಕು" ಅಂದಳು ಮತ್ತೊಬ್ಬಾಕೆ, "ನನಗೆ ಬಡ್ತಿ ಅಪ್ಪಣೆಯಾಗಬೇಕು" ಅಂದಳು. ಮತ್ತಿಬ್ಬರು ಮೂವರು ಮೇಜಿನ ಮೇಲೆ ರೂಪಾಯಿಗಳನ್ನು ಸರಿ ಸಿಟ್ಟು, ನಗುತ್ತಾ ನಮಸ್ಕಾರಮಾಡಿ, "ತಮ್ಮ ದಯದಿಂದ ಖಾಯಂ ಆಯ್ತು" ಎನ್ನುತ್ತಾ ಹೋದರು. ಅವರನ್ನೆಲ್ಲಾ ಕಳಿಸಿದ ಮೇಲೆ, ಬೆಪ್ಪುಮುಖದಿಂದ ಬಿರುಗುಟ್ಟುತ್ತಿದ್ದ ನನ್ನನ್ನು ನೋಡಿ ನಗುತ್ತಾ ಹೇಳಿದಳು ಸೀತಾ!

"ಇದ್ಯಾವ ಆಫೀಸರ್ ಕೆಲ್ಸ ಈ ಲೋವರ್ ಸೆಕೆಂಡರಿ ಫೆಯಿಲ್ಡ್ ಫ್ರೆಂಡಿಗೆ ಅಂತ ಬೆರಗಾಗಿದ್ದೀ ಅಲ್ವೇ?...."ಅನ್ನಪೂರ್ಣ ಏಜೆನ್ಸೀಸ್" ಅಡಿಗೆಯೋರನ್ನ ಒದಗಿಸುವ ಕೆಲಸ. ಅಡಿಗೆಗೆ ಹೆಂಗಸ್ರು ಬೇಕಾದೋರಿಗೆಲ್ಲಾ ಅಡಿಗೆಯೋರ್ನ ಸಪ್ಲೈಮಾಡ್ತೀನಿ, ಅವರ ವರ್ಗಾವರ್ಗಿ, ಹಂಗಾಮಿ—ಖಾಯಂಬಾಬ್ತು, ಬಡ್ತಿ, ಬದ್ಲಿ ಎಲ್ಲಾ ನನ್ನ ಕೈಲೇ ಇದೆ. ತಿಂಗಳಿಗೆ ಏನಿಲ್ಲಾಂದರೂ ಇನ್ನೂರು ರೂಪಾಯಿ ವರಮಾನ ನನಗೆ!" ಅಂದಳು.

"ಸರಿ ಅದೇನೋ! ಆದರೆ....ಅಡಿಗೇಗಿಟ್ಟುಕೊಳ್ಳೋರು ನಿನಗ್ಯಾಕೆ ದುಡ್ಡು ಕೊಡ್ತಾರೆ! ಅವರೇ ಬೇಕಾದವರನ್ನ ಇಟ್ಟುಕೊಳ್ಳುತ್ತಾರೆ, ಸಂಬಳ ಕೊಡ್ತಾರೆ!" ಅಂದೆ.

"ಅಯ್ಯೋ ಪೆಚ್ಚೀ! ನಿನಗೇನು ಗೊತ್ತು ಅದರ ಮರ್ಮ? ಹೇಳ್ತೀನೆ ಕೇಳು.. ಈ....ಪಾಕಶಾಸ್ತ್ರ ಪ್ರವೀಣೇರೆಲ್ಲ ನನ್ನ ಮೂಲಕವೇ ಹೋಗೋದು. ಅವರಿಗೊಂದು ಮನೆ ಒದಗಿಸಿಕೊಟ್ರೆ, ಪ್ರವೇಶಧನ ಐದು ರೂಪಾಯಿ ವಸೂಲಿ ಮಾಡುತ್ತೇನೆ. ಅವರಿಗೆ ಬಡ್ತಿ ಸಿಕ್ಕಿದರೆ, ಶೇಕಡ ಇಪ್ಪತ್ತೈದು ನನಗೆ! ವರ್ಗಾವರ್ಗಿಗೆ ಕೂಡ ನಿರತಾದ ರೇಟಿದೆ.

ಈ ಕೆಲ್ಸಕ್ಕೆ ನಾಲ್ಕೈದು ಜನ ಏಜೆಂಟರಿದಾರೆ. ಅವರು ದೊಡ್ಡ ದೊಡ್ಡೋರ ಮನೇಗೆಲ್ಲಾ ಶುಕ್ರವಾರದ ಅರಶಿನ ಕುಂಕುಮಕ್ಕೆ ಹೋಗುತ್ತಾರೆ. ಮಾಡಿದ ಪಾಪಕ್ಕೆಲ್ಲಾ ಬಿಡುಗಡೆ ಮಾರ್ಗ ಅಂತ ಅದೊಂದು ಮಾಮೂಲನ್ನೂ ಇಟ್ಟದಾರೇನ್ನು ದುಡ್ಡಿರೋರು!—ಅಲ್ಲೆಲ್ಲಾ ಇವರ ಕೈವಾಡ ಬಾಯ್‌ವಾಡ ನಡೆಯುತ್ತೆ...."ಮಾಸೀ ಅಮ್ಮಾವ್ರೇ, ನಿಮ್ಮನೇ ಅಡಿಗೇ ಆಕೆ. ಹನ್ನೆರಡು

ಘಂಟೆ, ಇನ್ನೂ ಇದಾರೆ! ಆ ರಾಮ್ರಾಯರ ಮನೇಲಿ ನೋಡಿ ಇಪ್ಪತ್ತು ಕೊಡ್ತಾರೆ, ಹನ್ನೊಂದಕ್ಕೇ ಹಸಿವು ತಡಿಯಲ್ಲ ಅಂತ ಉಂಡು ಕೂತುಬಿಡ್ತಾಳಂತೆ, ಆಕೆ ಪೇಚಾಡಿಕೊಂಡರು!" ಅಂತ ರಾಗ ತಾಳಬದ್ಧವಾಗಿ ಪಾಡೋದು. ಅಮ್ಮಾವ್ರು ಕಿವಿ ನೆಟ್ಟಗಾಗುತ್ತೆ ಹನ್ನೊಂದಕ್ಕೇ ಹೋಗೋಳಿಗೆ ಇಪ್ಪತ್ತು ಕೊಡುವಾಗ, ಹನ್ನೆರಡಾದರೂ ಹಾರಾಡದವಳಿಗೆ ಇಪ್ಪತ್ತೆರಡೂ ಕೊಡಬಹುದು ಅಂದುಕೊಳ್ಳುತ್ತಾರೆ. ಅಡಿಗೆ ಅಕೆ ಸುಮುಹೂರ್ತ ನೋಡಿ, "ಇಪ್ಪತ್ತೈದು ಇಟ್ಟಹೊರತೂ ನಾನಿರಲಾರೆ" ಅನ್ನುತ್ತಾಳೆ!

ಹೀಗೇ ಹೋದಕಡೆಯಲ್ಲಾ! "ರಾಧಾಬಾಯಿ ಮನೇ ಆಕೆ ರಾತ್ರಿಹೊತ್ತು ತಟ್ಟೇನೇ ತೊಳಿಯಲ್ಲವಂತೆ ಇಪ್ಪತ್ತೆರಡು ತೆಗೆದ್ಕೊಂಡೂನೂ!"...."ಪಾರ್ವತಮ್ಮನೋರ ಮನೆಯೋಳು ಫಳಾರಕ್ಕೆ ರವೇ ಸಕ್ರೇನೇ ಆಗಬೇಕೂಂತ ರಂಪು ಮಾಡ್ತಾಳಂತೆ ಮೂವತ್ತು ಸುರಿದು!"...."ಮೂವತ್ತೈದು ಕೊಡ್ತಾರೆ ಮಾಧೂರಾಯ್ರ ಮನೇಲಿ, ಹುಡುಗ್ರಿಗೆ ಹಿಟ್ಟು ಬಡಿಸಿ ತಾನೇ ಅನ್ನ ನುಂಗ್ತಾಳಂತೆ!...." ಇತ್ಯಾದಿ ಬಡಮಾತಿನಲ್ಲೇ ಬುಡಕ್ಕೇ ತಂದು ಬೆದರಿಸಿ, ಅಮ್ಮಾವ್ರುಗಳನ್ನ ಹದಕ್ಕೆ ತರುತ್ತಾರೆ. ಸರಿ, ನಮ್ಮ ಪರಿವಾರಕ್ಕೆ ಬಡ್ತಿ ಆಗುತ್ಲೇ ಇರುತ್ತೆ! ಹೀಗೇ....ಯಾರಿಗಾದ್ರೂ ಸಾಲ ಬಲವಾಗಿ ಆ ಜಾಗ ಬಿಡಬೇಕಾಗಿ ಬಂದ್ರೆ, ನನ್ನ ಬಳಿ ಬರ್ತಾರೆ. ಆಗ ಲಾಯಖ್ಖಾದ ಬದಲೀ ಇಸಮನ್ನು ನೋಡಿ, ನಮ್ಮ ಶುಕ್ರವಾರದ ಏಜೆಂಟರ ಮೂಲಕ, ಸದರೀ ಇಸಮಿನ ಕೈಚಳಕ, ಶುಚಿ ರುಚಿಗಳನ್ನ ಆಡಾಡಿ ಹೊಗಳಿಸಿ, ಇರುವವಳನ್ನು ಧಾರಾಳವಾಗಿ ತೆಗಳಿಸಿ, ಉಪಾಯವಾಗಿ ಬದಲಾವಣೆ ಮಾಡಿಸಿಬಿಡುತ್ತೇನೆ! ಹೀಗೇ ಎಷ್ಟೆಷ್ಟೋ!.... ಬರೀ ಬಾಯಿ ಚಾತುರ್ಯ ನೋಡು ನನ್ನ ಬಿಸಿನೆಸ್‌ನಲ್ಲಿ!" ಎಂದು ನಕ್ಕಳು ಸೀತಾಲಕ್ಷ್ಮಿ ಚಿನ್ನದ ಗಡಿಯಾರದ ಚೈನು ತಿರುಗಿಸುತ್ತಾ!

* * *

[ನನಗೂ ಯಾಕೋ ಹೊಟ್ಟೇಕಿಚ್ಚು ಬಂದಿದೆ. ಯೋಚಿಸುತ್ತಾ ಇದ್ದೇನೆ ಮುಸುರೆಯೋರ ಏಜೆನ್ಸೀಸ್ ಯಾಕೆ ಪ್ರಾರಂಭಿಸಬಾರ್ದೂಂತ! ಹೆಣ್ಣು ಮಕ್ಕಳ ಸ್ನೋ ಪೌಡರ್ ಬಾಬ್ತಾದರೂ ಸಂಪಾದನೆಯಾದೀತು!]

—ಬೆಂಗಳೂರು ಟಿ. ಸುನಂದಮ್ಮ.

# ಮೆಷ್ಟ್ರೇ ಹೊಣೆ

---

ಆಕೆ :—

ಬೆಳಗಾಗೆದ್ರೆ ಸಂಜೆ ತನಕ
ಯೋಚ್ನೆ ಮಾಡೋದು
ಕಾಗ್ದ ಪೇನಾ ಎತ್ಕೊಂಡ್ಬಿಟ್ಟು
ಗೀಚೇ ಗೀಚೋದು
ಸಂಜೆ ಹೊತ್ತಿಗೆ ಸಭೆ ಸೇರಿ
ಗಂಟಲ್ ಕೆರೆಯೋದು
ಸಾವಿರ ಸಲ ಆಡಿದ್ದನ್ನೆ
ಮತ್ತೆ ಆಡೋದು.

ಆತ :—

ವನ್ಸ್‌ಮೋರ್ ಅಂತೀನಿ ನೋಡು
ಆ ಒಂದ್ಮಾತೀಗೇನೆ
ಸಾವಿರ ಸಲ ಆಡಿದ್ದನ್ನೆ
ಆಡೋದಂದ್ಯೇನೆ ?
ಸ್ಪೀಚ್ ಕೊಡೋ ಕಸರತ್ತೆಲ್ಲ
ಕಲ್ತಿದ್ ನಿನ್ನಿಂದಾನೆ
ಆಡಿದ್ದನ್ನೇ ಆಡೋದಿದ್ರೆ
ಮೇಷ್ಟ್ರೇ ಹೊಣೆ ತಾನೆ ?

—ಸರೋಜಿನಿ ಆರೂರ್.

---

# ಬಡಿಸಿದ ಕೈ

ಯಜ್ಞಪ್ಪ ತಲೆಮೇಲೆ ಕೈಹೊತ್ತು ಉಸ್ಸಪ್ಪ ಎಂದು ಮರದ ಬುಡಕ್ಕೆ ಒರಗಿದ್ದ. ಹೊತ್ತ ಸಣ್ಣಂಗೊಸ್ತ್ರದಿಂದ ಗಾಳಿ ಹಾಕಿಕೊಂಡ. ನಾನೂ ಗಾಂಧಿ ಟೋಪಿ ತುದಿ ಚೂಪುಮಾಡುತ್ತಾ ಅವನ ಅವನ ಪಕ್ಕದಲ್ಲೇ ಕೂತೆ. ನಾನೇ ಕಾಲು ಕೆರೆದೆ.

"ಸೊಗಸಾಗಿತ್ತು........"

"ಅಲ್ಲದೆ ಮತ್ತೇನು........ಮೈಗೆ ಆರೋಗ್ಯ........ಶರೀರಕ್ಕೆ ತಂಪು"

"ತಿನ್ನೋ ಬಾಯಿ ಮುಖ್ಯವಲ್ಲ ಕೊಡೊ ಕೈಯಿ ಮುಖ್ಯ"

"ಹೌದು ಹೌದು—ಹೊಗೆ ಬಡಿದ ಕಣ್ಣಿನ ಕೆಂಚು ಮುಖ್ಯವಲ್ಲ—ಊದು ಗೊಳವೆ ಊದಿ ತಿದಿಯಾದ ತುಟಿ ಮುಖ್ಯವಲ್ಲ........ಗಾಜಿನ ತಟ್ಟೆ........ಹೋಳಿ ಯುವ ಲೋಟ ಕೈಯಿ........ಅದೇ ಮುಖ್ಯ—ಅಲ್ವೆ" ಎಂದು ತಂಬಾಕನ್ನು ಎಡಗೈಯಿಂದ ಬಾಯಿಗೆ ಕೊಡವಿಕೊಂಡ. ನಾನೇ ಮತ್ತೆ ಚುಚ್ಚಿದೆ........

"ಹುಲ್ಲಿನ ಹಲ್ವ—ಅವರೆ ಅಂಬೊಡೆ—ಕೊತ್ತಂಬರಿ ಪಾನಕ—ಕರಬೇವಿನ ಖೀರು—ಉದ್ದಿನ ಉಪ್ಪಿಟ್ಟು—ಕಡಲೆ ಕೊಸುಂಬರಿ—ಹುರುಳಿ ಸಾರು—ದಾಳಿಂಬ್ರಿ ಕಾಳಿನ ದೋಸೆ—ಶಾಲ್ಜೀರಿಗೆ—ಕಲ್ನಾರು—ಕಟಗರಾಣಿ—ದಾಲ್ಚಿನ್ನಿ ಮರಾಟಿ ಮೊಗ್ಗು—ಕಲ್ಲು ಹೂವು........"

"ಹೇಳು ಹೇಳು....ಬಾಯಿಗೆ 'ಬಂದದ್ದೆ ಹೇಳು—ಅಪದ್ದಕ್ಕೆ ಅಪ್ಪಣೆ ಎಲ್ಲಿಂದ ಬಂತು" ಎಂದು ತುಟಿ ಹಾಯಿಸಿ ಹೇಳಿ—ಪಿಚಕ್ ಎಂದು ಉಗುಳಿದ ಎಲಡಿಕೆ ರಸ. ನಾನು ಬಿಟ್ಟೆನೇ ಮತ್ತೆ ಕೊರದೆ .......

"ಪಲ್ಯಕ್ಕೆ ತರ್ಕಾರಿ ಒದಗಿ ಬರೋಲ್ಲಾಂತ ನೀನೇ ಎಷ್ಟೋ ಸಾರಿ ಪೊರಕೆ ಹೆಚ್ಚಿಹಾಕಿ ಬಡಿಸಿಲ್ಲವೆ?"

"ಥೂ ನಿನ್ನ-ಉಂಡ ಹೋಟಲಿಗೆ ಎರಡು ಬಗಿಯೋ ಭಂಡ....ನೀನು ..."

"ಅದಕ್ಕಲ್ಲ ಯಜ್ಞಪ್ಪ....ಮಾತಿಗೆ ಹೇಳಿದೆ—ನಿನ್ನ ಸವಿಮಾತು—ನಗು ಮುಖ ನೋಡಿಕಾನೆ ನಾನೂ—ಮಾಡಿಟ್ಟೆ ಪಂಚಭಕ್ಷ್ಯ ಬಡಿಸಿದ್ದೇ ಬಹದ್ದೂರ್ ಅಡಿಗೇಂತ ತಿಂದು ತೇಗಿದ ಧೀರನಲ್ಲವೆ ನಾನೂ......."

"ಈಗ ನಿನ್ನ ಅಭಿಪ್ರಾಯವೇನು ಹೇಳಬಾರದೆ ಸುತ್ತು ದಾರಿ ಬೇಡ—ನನಗೆ ಹೊತ್ತಾಯಿತು ಬಾಂಡ್ಲಿ ಕಾಯುತಾಯಿದೆ......."

"ಹಾ ! ಅದೇ ಈಗ ಬರ್‍ತಿದ್ದೆ ನೋಡು ನನ್ನ ಪಾಯಿಂಟಿಗೆ... ....ಈ ಕೆಫೆ ಟೇರಿಯಾಕ್ಕೆ ಸೊಂಟಕಟ್ಟಿ ನಿಂತೆಯಲ್ಲಾ ನೀನು ಸಿಕ್ಕಿದ್ದರಲ್ಲಿ ತಿನ್ನೊ ಪದಾರ್ಥ ಮಾಡ್ತೀನೀಂತ.... ಅದಕ್ಕೇ ನಿನಗೆ ಭಂಗಾರದ ತೊಡೆ ಕೊಡಿಸಬೇಕು....ಹೇಳಿದೆ ನಲ್ಲ....ಆಗಲಿ ಲಿಸ್ಟು—ಹುಲ್ಲಿನ ಪಲ್ಯ....ಗೊಂದಿನ ಪಲ್ಯ....ಎಂಥದ್ದೊ... ಸಾನ್ ರೇಷನ್ಡ್ ಆಗಿದ್ದರೆ ಸರಿ ...ಜಾರ್ಜೆಟ್ ಸೀರೆ—ಕಾಡಿಗೆ ಕಣ್ಣು—ಮಕಮಲ್ ಜೋಳಿ ....ಮಾವಿನಕಾಯಿ ಸರ... ಪ್ಲಾಸ್ಟಿಕ್ ಮೊಗ್ಗಿನ ಜಡೆ—ಬಳುಕುವ ಕೈ ಪ್ಲಾಸ್ಟಿಕ್ ಚಪ್ಲಿ ಇವು ನೋಡಿ ಹೊಟ್ಟೆ ತುಂಬಿತಲ್ಲ....ತಿಂದದ್ದು ಕಸವೇ—ರಸವೇ ಎಲ್ಲಿ ಹೊಳೀಬೇಕು—ಆ ಥಳಕಿನ ಕೆಫೆಟೆರಿಯಾದಲ್ಲಿ ?" ಎಂದು ಟೋಪಿ ಚೂಪುಮಾಡಿದೆ. "ಥೂ....ನಿನ್ನ..." ಎಂದವನು ಟೆಂಟಿನೊಳಕ್ಕೆ ಹೊರಟೇ ಹೋದ ಬಾಣಸಿಗ ಯಜ್ಞಪ್ಪ—ನಿನ್ನ ಸೇವಾದಳದ ಕಹಳೆಯೂ ಕೂಗಿತು—ಹೊರಟೆ—ಎ. ಐ. ಸಿ. ಸಿ. ಸಭೆಯ ಅಂಗವಾದ ಮಹಿಳೆಯರ ಮೆಹನತ್ತಿನ ಕೆಫೆ ಟೆರಿಯಾ ಬಾಗಿಲು ಕಾಯುಕೆ.

—ದಾಶರಥಿ ದೀಕ್ಷಿತ್.



ರಾಮು, ಚೆಕ್ಕಿನ ಚರ್ಮದಿಂದ ಏನಾದರೂ ಉಪಯೋಗ ಇದೆಯೇ! ತಿಳಿಸು.
ಚೆಕ್ಕುಗಳನ್ನು ಶಾಖವಾಗಿಡುತ್ತೆ ಸಾರ್!

# ಅಸೀತ್ರಿಯ ಕತೆಗಳು

(ಬಲಿತವರಿಗೆ)

ರಾಜೀವಪುರದಲ್ಲಿ ಒಬ್ಬ ದರ್ಜಿ ಇದ್ದನಂತೆ. ಅವನು ಸೊಗಸಾದ ಟೋಪಿ ಹೊಲಿಯೋದರಲ್ಲಿ ಬಲು ಶಹಣೆ ಅಂತೆ. ವಾರವೆಲ್ಲಾ ಟೋಪಿ ಹೊಲಿಯೋದು, ಸಂತೆ ದಿನ ಹೋಗಿ ಟೋಪಿ ಎಲ್ಲಾ ಮಾರಿ, ಜೀವನ ನಡೆಸೋದು. ಹೀಗೆ ನಡೀತಾ ಇತ್ತಂತೆ.

ಒಂದು ದಿನ ರೂಪಾಯಿಗೆ ಒಂದು ಸೇರು ಹಾಲು ಅಂದರಂತೆ. ರಸ್ತೆ ತುಂಬಾ ದನ ನಮ್ಮೂರಲ್ಲಿ ಹಾಲಿಗೇಕೆ ಇಷ್ಟು ಬೆಲೆ ಹಠಾತ್ತಾಗಿ, ವಿಚಾರಿಸಿದನಂತೆ. ಬೆಂಗಳೂರಲ್ಲಿ ಭಾರಿ ಪರಶೆ ಸೇರುತ್ತೆ, ಭಾರಿ ಭಾರಿ ಆಸಾಮಿಗಳೆಲ್ಲಾ ಭಾರತದಿಂದ ಬರ್ತಾರೆ, ಅವರ ಸರಬರಾಜಿಗೋಸ್ಕರ ಹೈನಗಳಿದ್ದ ಹಳ್ಳಿಗಳಿಂದ ಹಾಲಿನ ರೈಲನ್ನೇ ಏರ್ಪಡಿಸಿದ್ದಾರೆ. ಅದಕ್ಕೇ ಹಾಲಿಗೆ ಬೆಲೆ ಹಳ್ಳೀಲೂ ಹೆಚ್ಚು, ಅಂತ ಹೇಳಿದರಂತೆ.

ಭಾರಿ ಪರಶೆ ಅಂದರೆ ಟೋಪಿ ವ್ಯಾಪಾರಕ್ಕೆ ಅನುಕೂಲ ಅಂತ ದರ್ಜೀಗೆ ಹೊಳೆಯಿತಂತೆ. ಹಗಲೂ ರಾತ್ರಿ ಮನೆಯೋರೆಲ್ಲಾ ದುಡಿದು, ಪರಶೆ ಹೊತ್ತಿಗೆ ಮುನ್ನೂರು ಟೋಪಿ ತಯಾರಿಸಿದರಂತೆ. ಬುಟ್ಟೀಲಿ ವಾರಣವಾಗಿ ಪೇರಿಸಿದರಂತೆ.

ಪರಶೆ ಹಿಂದಿನ ದಿನ ದರ್ಜಿ ತನ್ನ ಸುರವಾಲು ಹಾಕ್ಕೊಂಡು ಜುಬ್ಬಾ ತಗಲಿಸಿಕೊಂಡು, ತನ್ನ ಟೋಪಿ ತಾನು ಹಾಕಿಕೊಂಡು, ಬೆಂಗಳೂರಿಗೆ ಹೊರಟನಂತೆ. ಮನೆ ಬಾಗಿಲಲ್ಲಿ ಮಗಳು ಅಂದಳಂತೆ "ಅಪ್ಪಾ! ನೋಡುಕ್ಕೆ ಸೊಗಸಾಗಿದ್ದಿ. ಆ ಜುಬ್ಬಕ್ಕೆ ಈ ರೋಜಾ ಹೂ ಸಿಕ್ಕಿಸಿಕೊ ಇನ್ನೂ ಚೆನ್ನ" ಅಂತ ಹಾಗೇ ಜುಬ್ಬದ ಮೇಲ್ ಕಾಜಕ್ಕೆ ಹೂ ಸಿಕ್ಕಿಸಿಕೊಂಡೇ ಹೊರಟನಂತೆ ಬುಟ್ಟಿ ಸಮೇತ.

ಮಧ್ಯಾಹ್ನ ಹಾದೀಲಿ ಹೊಂಗೇ ತೋಪು. ದರ್ಜಿ ಸುಸ್ತಾಗಿದ್ದ. ನೆರಳು ತಂಪಾಗಿತ್ತು. ಇಲ್ಲೇ ಬುತ್ತಿ ತಿಂದು ಸ್ವಲ್ಪ ವಿಶ್ರಮಿಸಿಕೊಂಡು ಹೋಗೋಣ ಅಂತ ತೋಪಿನಲ್ಲೇ ತಂಗಿದನಂತೆ. ಉಂಡು ಎರಡು ನಿಮಿಷ ಮಲಗಿದನಂತೆ.

ಏಳೋ ಹೊತ್ತಿಗೆ ಸೂರ್ಯ ಪಶ್ಚಿಮದಲ್ಲಿದ್ದನಂತೆ. ಹೊತ್ತಾಯ್ತು ಅಂತ ಬೇಗ ಬೇಗ ಎದ್ದು ಹೊರಡುಕ್ಕೆ ಸಿದ್ಧವಾಗಿ ಬುಟ್ಟಿ ಕೈಗೆ ತೊಗೋತಾನೆ? ಬುಟ್ಟಿ ಹಗುರವಾಗಿದೆ. ಒಳಗೆ ನೋಡ್ತಾನೆ! ಒಂದು ಟೋಪೀನೂ ಇಲ್ಲ! ಅಯ್ಯೋ! ದೇವರೇ! ಸುತ್ತಲೂ ಯಾರೂ ಇಲ್ಲ! ಟೋಪಿಗಳೆಲ್ಲಾ ಹೇಗೆ ಮಾಯವಾದುವು ಅಂತ ದುಃಖದಿಂದ ಮೇಲೆ ನೋಡ್ತಾನೆ—ಒಂದೊಂದು ಮರದ ಒಂದೊಂದು ಕೊಂಬೆ ಮೇಲೂ ಒಂದೊಂದು ಕೋತಿ ಟೋಪಿ ಹಾಕ್ಕೊಂಡು

ಆಕಾಶ ನೋಡ್ತಾ ಇತ್ತಂತೆ. "ಹುಶ್" ಅಂದನಂತೆ ಅವೆಲ್ಲವೂ ಹುಶ್ ಅಂತ ಅಂದುವಂತೆ. ಟೋಪಿ ತಂದುಕೊಡು ಇಲ್ಲದೆ ಇದ್ದರೆ ಕಲ್ಲೆಸೀತೀನಿ ಅಂತ ಬರೀ ಕೈ ಬೀಸಿದನಂತೆ. ಎಲ್ಲಾ ಕೋತಿಗಳೂ ಪಿಚಿ ಪಿಚಿ ಅಂತ ಅಣಕಿಸಿ ಕೈ ಬೀಸಿದುವಂತೆ. "ಗೇರ್ ಗೇರ್ ತಿಮ್ಮಣ್ಣಾ. ನನ್ನೊಂದಿಗೆ ಬನ್ನಿ ಚೇಪೆ ಕಾಯಿ ಕೊಡ್ತೀನಿ" ಅಂದನಂತೆ. ಕಿಚಿ ಕಿಚಿ ಕಿಚಿ ಕಿಚಿ ಅಂತ ಅವೆಲ್ಲಾ ಅಣಕಿಸಿದುವಂತೆ. ಕೋಪ ಬಂದು ತನ್ನ ತಲೇಗೆ ಕೈ ಇಟ್ಟು ತನ್ನ ಟೋಪೀನ ನೆಲಕ್ಕೆ ಎಸೆದನಂತೆ. ಎಲ್ಲಾ ಕೋತಿಗಳೂ ಹಾಗೆಯೇ ಟೋಪಿಗಳನ್ನ ತಮ್ಮ ತಮ್ಮ ತಲೆಯಿಂದ ಕೆಳಕ್ಕೆ ಎಸೆದುವಂತೆ. ಬದುಕಿದೆ ಅಂತ ಟೋಪೀನೆಲ್ಲಾ ಬುಟ್ಟೀಗ್ಹಾಕೊಂಡು, ಬೇಗ ಬೇಗ ಬೆಂಗಳೂರಿಗೆ ಬಂದನಂತೆ.

ದೊಡ್ಡ ಷಹರು, ಗಲಾಟೆಯೋ! ಗಲಾಟೇ! ಟೋಪಿ ಮಾರುಕ್ಕೆ ಅಂತ ನೋಡ್ತಾನೆ. ಎಲ್ಲಾರ ತಲೇಲೂ ಟೋಪೀನೆ. ಹೊಸ ಟೋಪಿ ಹಾಕೋಣ ಅಂತ ಯಾರಿಗೂ ಇಷ್ಟವಿದ್ದಹಾಗೆ ಕಾಣಲಿಲ್ಲ. ವ್ಯಾಪಾರ ಕುದುರಲಿಲ್ಲ! ಹೋಗಲೀ ಲಾಲ್‌ಬಾಗಿನಲ್ಲಿ ತಂಪಾಗಿ ಎರಡು ನಿಮಿಷ ಮಲಗಿದ್ದು ಹೋಗೋಣ ಹೊಂಗೇ ತೋಪಿನ ಹಾಗೇ ಅಲ್ಲೂ ತಂಪು ಅಂತಾರೆ ಅಂತ ಲಾಲ್‌ಬಾಗಿಗೆ ಹೋದನಂತೆ.

ಅಳೇಬಳ್ಳಿ ಕೆಳಗೆ ಮಲಗಿದ್ದನಂತೆ—ಪಾಪಿ! ಷಹರಿಗೆ ಹೋದರೂ ಮೊದಲ ಟೋಪೀನೂ ಮಾರುಕ್ಕಾಗಲಿಲ್ಲ ಅಂತ ದುಃಖಪಡ್ತಾ ಇದ್ದನಂತೆ.

ಆಗೊಬ್ಬ ಆಗಂತುಕ ಬಂದನಂತೆ—ಬಂದು ಇವನನ್ನು ಮಾತನಾಡಿಸಿದನಂತೆ, "ಅಯ್ಯಾ! ಟೋಪಿವಾಲ! ಊರಿಗೆ ಊರೇ ಸಂಭ್ರಮದಿಂದಿದೆ. ರಸ್ತೆ ರಸ್ತೇನೂ ಕೆಂಪೇರಿ ಕಂಗಳಿಗೆ ಆನಂದದಾಯಕವಾಗಿದೆ. ಇಂತಹದರಲ್ಲಿ ನೀನೇಕೆ? ಹೀಗೆ ದುಃಖಿ" ಎಂದು.

ತನ್ನ ಕಷ್ಟಾನ ದರ್ಜಿ ತೋಡಿಕೊಂಡನಂತೆ, ಹೊಂಗೆ ತೋಪಿನಲ್ಲೆ ಪಾಪಿ ತಲೆಗಾದರೂ ಒಪ್ಪೆ ಹಾಕಿಕೊಂಡವು ಅಂತ.

ಆಗ ಆಗಂತುಕ ಅಂದನಂತೆ. ಭಯಪಡಬೇಡ. ಈ ಟೋಪೀನ ಸ್ವಲ್ಪ ಮಾರ್ಪಾಡು ಮಾಡು. ಎಲ್ಲವನ್ನೂ ಒಟ್ಟಿಗೇ ಮಾರಿಸ್ತೇನೆ ಎಂದು.

ದರ್ಜಿಗೆ ಖುಷಿಯಾಯ್ತಂತೆ. "ನನ್ನೊಡನೆ ನೀನಿರುವುದಾದರೆ ಯಾವ ಟೋಪಿ ಯಾರಿಗೆ ಬೇಕಾದರೂ ಮಾರ್ತೇನೆ? ಅಂದಹಾಗೇ ನಿನ್ನ ಹೆಸರೇನು" ಅಂದನಂತೆ.

"ಅಹಂ-ಮದ ಕಿದ್ವಾಯ್" ಎಂದು ಉತ್ತರ ಬಂತ್ತತೆ.

**ನೀತಿ :**—ಬುಟ್ಟೀಲಿ ಟೋಪಿ ಹಾಕೋದಕ್ಕಿಂತ, ಟೋಪೀನ ಬುಟ್ಟೀಲಿ ಹಾಕೊಳ್ಳೋದೇ ಬಲು ಒಳ್ಳೆಯದು.

## "ಸಾಕಿ" ಯ
## ಅಡುಗೂಲಜ್ಜಿ

---

ಬೆಂಗಳೂರಿಂದ ಕೆಳಮಂಗಲಕ್ಕೆ ನನಗೆ ವರ್ಗಾ ಆದಾಗ, ಶಾಲೆಗೆ ಶಾಲೆಯೇ ಅತ್ತಿತು. ಅಷ್ಟು ಸಾಧುವಾದ ಪ್ರಾಣಿ, ಕೆಳಮಂಗಲದಲ್ಲಿ ಹೇಗೆ ಬಾಳಿ ಬದುಕುತ್ತೆ? ಅಂತ ನನ್ನ ಸಹಮಾಸ್ತರುಗಳ ಯೋಚನೆ. ಹೇಳಿದ ಹಾಗೇ ಕೇಳೋ ಮಾಸ್ತರು ಹೋಗ್ತಾರಲ್ಲಾ ಅಂತ ಹುಡುಗರ ದುಃಖ. ಒಬ್ಬ ರನ್ನೇ ಕಳಿಸಬೇಕಲ್ಲಾ ಅಂತ ಮನೆಯವಳ ಚಿಂತೆ. ಏಕೆಂದರೆ ಅವಳು ಬೆಂಗಳೂರಿನಲ್ಲೇ ವೀಣೆಪಾಠ ಹೇಳಿಕೊಂಡು ಮುಕ್ಕಾಲುಪಾಲು ಸಂಸಾರ ತೂಗುತ್ತಾ ಇದ್ದಳು. ಅದನ್ನೆಲ್ಲಾ ಬಿಟ್ಟು ಈ ಕೆಳಮಂಗಲಕ್ಕೆ ಬಂದರೆ ಜೀವನವೇ ಅಪಾಯ. ಅದಕ್ಕೋಸ್ಕರ ಅವಳು ಬರುವ ಹಾಗಿದ್ದಿಲ್ಲ. ನನಗಂತೂ ಮಹಾ ಯೋಚನೆ! ಒಬ್ಬನೇ ಸಂಸಾರ ಮಾಡಿದ್ದೇ ಇಲ್ಲ. ಹೇಗಪ್ಪಾ ತಿಳಿಯದ ಊರಿನಲ್ಲಿ! ಅಂತ. ಯಾವುದೋ ಮಾಸ್ತರು ಯಾವುದೋ ಹುಡುಗನನ್ನು ಫೇಲ್ ಮಾಡಿಸಿದ್ದಕ್ಕೆ—ನಾನು ಅನಧಿಕೃತವಾಗಿ ಮನೆ ಪಾಠ ಮಡಗಿಕೊಂಡಿದ್ದೆ ಅಂತ ನನ್ನ ವರ್ಗಮಾಡಿಬಿಟ್ಟರಲ್ಲಾ ಎಂದು ದುಃಖಿಯಾಗಿದ್ದೆ. ಆದರೇನು ಮಾಡುವುದು? ನನ್ನ ಚಪ್ಪಲಿ ಅಡಿಯಲ್ಲಿ ಬ್ರಹ್ಮ ಬರೆದ ಕಡೆಯಲ್ಲಾ ಓಡಾಡಲೇ ಬೇಕಲ್ಲವೇ! ಹೊರಟೆ! ಕೆಳಮಂಗಲದ ಮುಸಾಫರ ಖಾನೇಲಿ ಆ ದಿನ ತಂಗಿದೆ. ಮಾರನೆ ದಿನದಿಂದ ಮನೆ ಹುಡುಕುಕ್ಕೆ ಶುರು. ಆ ಕೊಂಪೇಲಿ ಮನೆಗಳೇ ಇಲ್ಲ. ಶಾಲೆಯಲ್ಲಿ ಹೆಡ್‌ಮಾಸ್ತರೇ ಇದ್ದರು. ಮಿಕ್ಕಕಡೆ ಎಡೆಯಿಲ್ಲ. ಎರಡು ಮೂರು ಮೈಲಿ ದೂರದ ಹಳ್ಳಿಗಳಲ್ಲಾದರೂ ಮನೆ ಸಿಕ್ಕಿದರೆ, ಕಡೆಗೆ ಗುಡಿಸಲು ಸಿಕ್ಕಿದರೆ ಸಾಕು ಎನ್ನಿಸಿತು. ಕಡೆಗೆ ನಮ್ಮ ಶಾಲಾ ಜವಾನ ಹೇಳಿದ, "ಕೂಗು ಕೇಳೋ ದೂರದಲ್ಲಿರುವ ಹಳ್ಳಿಯಲ್ಲಿ ಒಂದು ಮಂಗಳೂರು ಹಂಚಿನ ಮನೆ ಇದೆ. ಅದರಲ್ಲರ್ಧ ಬಾಡಿಗೆಗೆ ಕೊಡ್ತಾರೆ" ಅಂತ.

ಶನಿವಾರ ಬೆಳಿಗ್ಗೆ ಶಾಲೆ ಮುಗಿಸಿಕೊಂಡು ಆ ಹಳ್ಳಿಗೆ ಹೊರಟೆ. ಸುಮಾರು ೧೧–೧೧॥ ಇರಬಹುದು ಸೇರಿದಾಗ. ಜವಾನ ಹೇಳಿದ ಮನೆ ಬೇಗಲೇ ಸಿಕ್ಕಿತು. ಬಾಗಿಲು ತಟ್ಟಿದೆ. ಒಂದು ಪುಟಾಣಿ ಹೆಣ್ಣುಮಗು, ಸುಮಾರು ೮-೯ ವರ್ಷದ ಮುದ್ದು ಗೌರಮ್ಮನಂತಹ ಹೆಣ್ಣುಮಗು, ಕಿರಿಗೆ ಉಟ್ಟುಕೊಂಡು, ನೆರಿಗೆ ಸಿಕ್ಕಿಸಿಕೊಂಡು ಬಾಗಿಲ ತೆಗೆದಳು. "ಅಪ್ಪಾ ಇದಾರೆ ಯೇನಮ್ಮಾ" ಎಂದೆ. "ಇಲ್ಲಾ ಇವತ್ತು ಸಂತೆಗೆ ಹೋಗಿದ್ದಾರೆ. ಸಾಯಂ

ಕಾಲಕ್ಕೆ ಬರೋದು, ಆದರೆ ಅಮ್ಮಾ ಕೆರೆಗೆ ಹೋಗಿದ್ದಾರೆ, ಕುಡಿಯೋ ನೀರು ತರುಕ್ಕೆ. ಇನ್ನೊಂದು ಘಂಟೇಲಿ ಬಂದುಬಿಡ್ತಾರೆ. ಕೂತುಕೊಳ್ಳಿ" ಎಂದು ಹಜಾರದಲ್ಲಿ ಒಂದು ಚಾಪೆ ಹಾಸಿದಳು. ಎಂತಹ ಚೂಟಿ ಹುಡುಗಿ ಅಂದು ಕೊಂಡೆ. ಅಷ್ಟರಲ್ಲೇ ಕೇಳಿದಳು. ನಿಮಗೇನು ಬೇಕಾಗಿತ್ತೋ ಅಪ್ಪನ ಹತ್ತಿರ ಅಂತ. ಹೀಗೆ ಹೀಗೆ ಅರ್ಧಮನೆ ಬಾಡಿಗೆಗಿದೆ ಅಂದರು, ಅದು ಕೇಳುಕ್ಕೆ ಬಂದೆ ಅಂದೆ. ಹಾಗಾದರೆ ಅಪ್ಪ ಬರೋತನಕ ಕಾಯಬೇಕಾಗಿಲ್ಲ, ಅಮ್ಮ ಬಂದರೆ ಸಾಕು ಎಲ್ಲಾ ಮಾತುಕತೆ ಆಗಬಹುದು ಅಂದಳು. ಎಂತಹ ಚುರುಕು ಹುಡುಗಿ ಅಂದುಕೊಂಡೆ. ನಿಮಗೇನು ಕೆಲಸವೋ? ಎಲ್ಲೋ? ಎಂದಳು. ಪ್ರವರ ಎಲ್ಲಾ ಹೇಳಿದೆ. "ಅಯ್ಯೋ! ಪಾಪ!" ಎಂದಳು. "ಯಾಕವ್ವಾ ಹಾಗಂತೀ" ಅಂದೆ. "ನಿಮಗೆ ಗೊತ್ತಿಲ್ಲವೇನೋ ಪಾಪ! ಅಮ್ಮನ ಕತೆ, ಹತ್ತು ವರ್ಷದ ಹಿಂದೆ ಅವರು ಮಗನ್ನ ಕರೆದುಕೊಂಡು ಕುಡಿಯೋ ನೀರು ತರುಕ್ಕೆ ಅಂತ ಕೆರೆಗೆ ಹೋದರು. ಮಗ ಎರಡು ಬಿಂದಿಗೆ ನೀರನ್ನು ಅಡ್ಡೆ ಕಟ್ಟಿದ ಹಾಗೆ ಮಾಡಿ, ಅಲ್ಲಿದ್ದ ಎಮ್ಮೆ ಬೆನ್ನಮೇಲೆ ಹಾಕಿ, ಮನೆಗೆ ಹೊಡೆದುಕೊಂಡು ಬರುತ್ತೇನೆ, ನೀನು ದೇವಸ್ಥಾನಕ್ಕೆ ಹೋಗಿ ಮಂಗಳಾರತಿ ಮಾಡಿಸಿ ಮನೆಗೆ ಹೋಗು ಅಂದ. ಅಮ್ಮ ಮನೆಗೆ ಬಂದರು. ಆದರೆ ಮಗ, ಎಮ್ಮೆ ಇನ್ನೂ ಬರಲೇ ಇಲ್ಲ. ಇವತ್ತು ಬರ್ತಾನೆ, ನಾಳೆ ಬರ್ತಾನೆ ಅಂತ ಅಮ್ಮ ಕಾಯ್ತಾನೇ ಇದಾಳೆ. ಅವನು ಬಂದರೆ, ಅರ್ಧ ಮನೆಯ ಮುಂದಿನ ಕೊಠಡೀಲಿ ಇರುತ್ತಾನೆ. ಅದಕ್ಕೇ ಅದನ್ನು ಖಾಲಿ ಬಿಟ್ಟುಕೊಂಡಿದ್ದಾಳೆ ಅಮ್ಮ—ಮಗ ಬರ್ತಾನೆ ಅಂತ. ಅಮ್ಮ ಒಪ್ಪಿದರೆ ನಿಮಗೇ ಕೊಡಬಹುದು ಆ ಕೊಠಡೀನ ಎಂದಳು.

ಶಾಲಾ ಇನ್‌ಸ್ಪೆಕ್ಟರನ್ನು ನೋಡಿದರೇ ನನಗೆ ಜಂಘಾ ಬಲ ಉಡುಗಿ ಹೋಗುತ್ತೆ. ಮೈ ಕೈ ಎಲ್ಲಾ ಬೆವರು ಸುರಿದು ಬೋರ್ಡ್ ಚಾಕು ಒದ್ದೆ ಯಾಗುತ್ತೆ. ಅತ್ತೆ ಮಾವ ಬಂದು ಮಾತಾಡಿಸಿದರೆ—ಮೂರು ಮಕ್ಕಳ ತಂದೆ —ಇನ್ನೂ, ಬೆಚ್ಚಿಬೀಳುತ್ತೇನೆ. ಇಂತಹ ನನಗೆ ದೆವ್ವದ ಕೊಠಡಿಯಲ್ಲಿ ಒಂದು ರಾತ್ರಿಯಾದರೂ ಬದುಕಿ ಇರಲು ಸಾಧ್ಯವೇ? ಕೊಠಡೀನೂ ಬೇಡ. ಕೆಲಸವೂ ಬೇಡ. ಕೆಟ್ಟು ಪಟ್ಟಣ ಸೇರಿದರೆ ಹೇಗೋ ಹೆಂಡತಿ ಜೀವನ ನಡೆಸ್ತಾಳೆ. ಅವಳ ನೆರಳಿನಲ್ಲಿ ಧೈರ್ಯವಾಗಿ ಬದುಕಾದರೂ ಬದುಕಿರಬಹುದು ಎಂದು ಹೊರಡಲು ಸಿದ್ಧವಾದೆ. ಅಷ್ಟರಲ್ಲಿ "ಅಮ್ಮ" ಬಂದಳು. "ನೀವೇನೋ ಹೊಸ ಮಾಸ್ತರು? ಶಾಲೆ ಜವಾನ ಹೇಳಿದ ನೀವು ಅರ್ಧ ಮನೆ ಬಾಡಿಗ್ಗೆ ಬರಬಹುದು ಅಂತ. ಮನೆ ನೋಡಿದಿರಾ! ಏನೇ! ಮಗೂ! ಮನೆ ತೋರಿಸಿದೆಯೋ! ಇಲ್ಲಾ ಬರೀ ಹರಟುತ್ತಿದ್ದೆಯೋ! ನಿನ್ನ ಕಾಕಮ್ಮ ಬುಳ್ಳಮ್ಮನ ಕತೆ ಹೇಳ್ತಾ ಇದ್ದೆಯೋ" ಎಂದರು.

"ಮಗೂ" ಕಣ್ಣುರೆಪ್ಪೆ ಹಾರಿಸದೆ ಮರುಳಿಯಂತೆ ನಿಂತಿದ್ದಳು.

"ಬಂದೆಯಾ ಮಗನೇ!" ಅಂತ ಬೀದಿ ಕಡೆ ಅಮ್ಮ ನೋಡಿದರು. ದೂರ ದಲ್ಲಿ ಒಬ್ಬ ಹುಡುಗ ಎಮ್ಮೆ ಬೆನ್ನ ಮೇಲೆ ಅಡ್ಡೆ ಹಾಕಿ ತಾನೂ ಕೂತುಕೊಂಡು ಬರುತ್ತಿದ್ದ. ಸಾಕ್ಷಾತ್ ಯಮನನ್ನು ಕಂಡ ಹಾಗಾಯ್ತು ನನಗೆ.

ತಲೆಗೆ ಬಂದ ಫೇರಿಯನ್ನು ಹತೋಟಿಗೆ ತಂದುಕೊಂಡು, ಕಾಲಿಗೆ ಬುದ್ಧಿ ಹೇಳಿದೆ ಬೇಗ ಬೇಗ. "ಅಮ್ಮಾ! ಆ ಮೇಲೆ ಬಂದು ನೋಡ್ತೇನೆ ನಿಮ್ಮ ಯಜಮಾನರನ್ನ, ಮನೆ ವಿಚಾರಕ್ಕೆ" ಎಂದು ಹೇಳುತ್ತಾ ಓಡಿಯೇಬಿಟ್ಟೆ.

'ಯಜಮಾನರ್ಯಾಕ್ರೀ ಇದಕ್ಕೆ! ನಾನೇ ಮಾತನಾಡ್ತೇನೆ' ಎಂತ ಅವರು ಅನುತ್ತಿದ್ದುದು ಕೇಳಿಸಿತು ಅಷ್ಟು ದೂರದಲ್ಲಿ ಕೂಡ. ನಾನು ಮುಸಾಫರ ಖಾನೇನ ಹತ್ತೇ ನಿಮಿಷದಲ್ಲಿ ಸೇರಿದೆ. ಹೋಗೋದಕ್ಕೆ ಅರ್ಧಗಂಟೆ ಆಗಿದ್ದರೂ ಹಿಂತಿರುದಾಗ ಹತ್ತೇ ನಿಮಿಷ.

ಮಾರನೇ ಭಾನುವಾರ, ಹೆಡ್ಮಮಾಸ್ತರ ಮಗನ ಹುಟ್ಟಿದ ಹಬ್ಬಕ್ಕೆ ಊಟಕ್ಕೆ ಕರೆದಿದ್ದರು. ಆಜೂಬಾಜೂ ಹಳೆಯ ಹಿರಿಯ ಹಾರವರೆಲ್ಲರೂ ಬಂದಿದ್ದರು. ಊಟಕ್ಕೆ ಕೂತಾಗ ಆ ಮಾತು ಈ ಮಾತು ಆಡುತ್ತಿದ್ದಾಗ ಒಬ್ಬಾತ ಅಂದ. "ಅಂದ ಹಾಗೇ ಯಾರೋ ಬಾಡಿಗೆ ಮನೆ ಬೇಕು ಅಂತ ನಮ್ಮನೆಗೆ ಬಂದಿದ್ದರಂತೆ ನಿನ್ನೆ. ಆದರೆ ಮಾತನಾಡುಕ್ಕೆ ಮುಂಚೇನೆ ದೆವ್ವ ಹಿಡಿದವರಂತೆ ಓಡಿಯೋ ಹೋದನಂತೆ. ಎಂದಿನಂತೆ ಕುಡಿಯೋ ನೀರನ್ನು ತರ್ತಾ ಇದ್ದ ನಮ್ಮ ಹುಡುಗ, ಎಮ್ಮೆ ಮೇಲೆ ಅಡ್ಡೆ ಹಾಕಿ. ಇವನು ಹೋದ ವೇಗಕ್ಕೆ ಆ ಎಮ್ಮೆ ಕೂಡ ಬೆದರಿತಂತೆ. ನಮ್ಮ ಹುಡುಗ ಪ್ರಯಾಸಪಟ್ಟು ಅದನ್ನು ಹತೋಟಿಗೆ ತರಬೇಕಾಯ್ತಂತೆ. ನಮ್ಮ ಗೌರೀನ ಕೇಳಿದೆ. ಏಕಮ್ಮಾ! ನೀನು ಮಾತನಾಡುತ್ತಾ ಇದ್ದೆಯಲ್ಲ ಅವರ ಹತ್ತಿರ. ಏನು ಸುದ್ದಿ ಅಂತ. ಅವಳು ಹೇಳಿದಳು, "ಬಂದಿದ್ದೋರು ಎಂ. ಎ. ಪರೀಕ್ಷೆಗೆ ಎಂಟು ಸರ್ತಿ ಕಟ್ಟಿದ್ದರಂತೆ. ಒಂದೊಂದು ಸರ್ತಿ ಪರೀಕ್ಷೇಗೆ ಹೊರಟಾಗಲೂ ಎಮ್ಮೆ ಕಾಣಿಸಿತಂತೆ. ಆಸರ್ತಿ ನಪಾಸು. ಹೀಗೆ ಎಂಟು ಸರ್ತಿ ಎಂಟು ವರ್ಷ ಆಯಿತಂತೆ. ಕಡೆಗೂ ಎಂ. ಎ. ಆಗಲೇ ಇಲ್ಲವಂತೆ. ಅವರಿಗೆ ಈಗ ಎಮ್ಮೆ ಕಂಡರೆ ಬೆದರಿ ಓಡುತ್ತಾರಂತೆ. ಏನು ಕೆಲಸ ಮಾಡಬೇಕಾದರೂ, ಎಮ್ಮೆ ಅಪಶಕುನ ಆದರೆ ಅಲ್ಲಿಗೇ ಆ ಪ್ರಯತ್ನ ಬಿಡುತ್ತಾರಂತೆ. ಅಂತ ಹೇಳಿದಳು. ಓದಿದವರು ಅಷ್ಟು ಹೆಡ್ಡುಗಳೇ! ಅಷ್ಟು ನಂಬಿಕೆಯೇ ಶಕುನದಲ್ಲಿ! ಆಶ್ಚರ್ಯ ನೋಡಿ!" ಅಂದರು.

ಆಗ ಅರ್ಥವಾಯಿತು ಅವರು ಯಾರು ಎಂಬುದು.

ಅಷ್ಟರಲ್ಲೇ ಅವರು ಹೆಮ್ಮೆಯಿಂದ ಮುಂದುವರಿಸಿದರು. "ನೋಡಿ ನಮ್ಮ ಗೌರಿ ಏನು ಶಹಣೆ ಅಂತೀರಾ! ಹತ್ತು ನಿಮಿಷ ಮಾತಾಡಿದರೇ ಎಲ್ಲಾ ಸೂಕ್ಷ್ಮವನ್ನೂ ಗ್ರಹಿಸುತ್ತಾಳೆ. ಥೇಟ್ ನಮ್ಮ ಅಮ್ಮನ ಹಾಗೇನೆ! ನಮ್ಮ ಅಮ್ಮ ಸತ್ತಮೇಲೆ ಇವಳು ಹುಟ್ಟಿದ್ದು" ಅಂದರು.

ಮೆಲ್ಲಗೆ ಕೇಳಿದೆ. "ನಿಮ್ಮ ಅಮ್ಮನ ಹೆಸರೇನು" ಅಂತ. ಗೌರಿ ಅಂತ ಮನೇಲಿ ಕರೀತಿದ್ದರು. ಆದರೆ ಹಳ್ಳಿಯವರೆಲ್ಲಾ ಅಡುಗೂಲಜ್ಜಿ ಎಂದೇ ಅನ್ನುತ್ತಿದ್ದರು. ಅಷ್ಟು ಚೆನ್ನಾಗಿ ಕತೆ ಕಟ್ಟುತ್ತಿದ್ದರು" ಎಂದ ಆತ.

ಭಲೇ! ಅಡುಗೂಲಜ್ಜಿ ಮರಳಿ ಬಂದೆಯಾ! ಎಂದುಕೊಂಡೆ.

—ಬಜ್ಜ.

—o—




ಬನ್ನೀ! ಬನ್ನೀ! ಪಂಡಿತ ನೆಹ್ರೂ ಪಟೇಲ್ ಗಾಂಧೀ ಎಲ್ಲರನ್ನೂ ನೋಡೋರಂತೆ ಒಂದೇ ಆಣೆ.

# ಪ್ರೊಫೆಸರರು ನೇಗಿಲ ಕರ್ಮಯೋಗಿಯಾದುದು

ಬೆಳಗಾಂವ ಹತ್ತಿರದ ಬಡ ಸಂಸಾರದಲ್ಲಿ ಒಬ್ಬ ಹುಡುಗ ಹುಟ್ಟಿದ. ಅಣ್ಣನ ಉತ್ತೇಜನದಿಂದ, ಸಹಾಯದಿಂದ, ಈ ಹುಡುಗ ಬೆಳಗಾಂಗೆ ಹೋಗಿ ಓದಿ, ನಂತರ ಬೊಂಬಾಯಿಗೆ ಕಲಾಶಾಲೆಯಲ್ಲಿ ಅಭ್ಯಾಸಕ್ಕೆ ಹೋದ. ವಿರಾಮ ಕಾಲದಲ್ಲೆಲ್ಲಾ ಯಂತ್ರಗಳ ವಿಚಾರ ಅಧ್ಯಯನ ಮಾಡಿ, ಉಳಿತಾಯದ ಹಣ ದಲ್ಲಿ ಅಮೇರಿಕನ್ ಯಂತ್ರಪತ್ರಿಕೆಗಳನ್ನು ತರಿಸಿ ತನ್ನ ಜ್ಞಾನವನ್ನು ಹೆಚ್ಚಿಸಿ ಕೊಂಡ. ಇವನ ವ್ಯಾಸಂಗದ ಆಳವನ್ನು ಕಂಡವರು ಇವನಿಗೆ ಅಂದಿಗೆ ಹಿರಿ ದಾದ ೫೦ ರೂ. ಪಗಾರದ ಮೇಲೆ ಪ್ರೊಫೆಸರಾಗಿ ನೇಮಿಸಿದರು. ಆದರೆ ಕೆಲವೇ ದಿನಗಳಲ್ಲಿ ಆಡಳಿತದವರು ತನಗೆ ಅನ್ಯಾಯ ಮಾಡಿದಾಗ, ಮಾನಧನಿಯಾದ ಈತ ಕೆಲಸಕ್ಕೆರಾಜೀನಾಮೆ ಕೊಟ್ಟ. ಸ್ವತಂತ್ರ ಜೀವನದಲ್ಲಿ ಈ ಗೋಳಿಲ್ಲ ಎಂದು ಡಬ್ಬಿಗಳು, ಗುಂಡಿಗಳ ತಯಾರಿಕೆಗೆ ಕೈಹಾಕಿದ.

೧೮೯೭ರಲ್ಲಿ ಮುಂಬಯಿನಲ್ಲಿ ಅಸಾಧ್ಯ ಪ್ಲೇಗಿನ ಹಾವಳಿ. ಈತ ಮತ್ತು ಈತನ ಹೆಂಡತಿ ಪ್ಲೇಗು ತಗಲಿದರೂ ಬದುಕಿ ಬಂದರು. ಆದರೆ ಅಲ್ಲಿನ ಪರಿಸ್ಥಿತಿಯಲ್ಲಿ ಅವರ ಕಾರ್ಯಾಗಾರ ತೆರೆಯುವಂತಿದ್ದಿಲ್ಲ.

೧೯೦೨ರಲ್ಲಿ ಔಂಧಿನ ಬಾಲಾಸಾಹೇಬರು ಒಂದು ಭವ್ಯ ಸಭಾಮಂಟಪ ವನ್ನು ಕಟ್ಟಲು ಈತನಿಗೆ ಆಹ್ವಾನವಿತ್ತರು. ರೂ ೬೫,೦೦೦ ದ ಆ ಹಿರಿಯ ಕೆಲಸವನ್ನು ಸಾಂಗವಾಗಿ ಮುಗಿಸಿದ.

ಬಂದ ಹಣದಲ್ಲಿ ಬೆಳಗಾಂವನಲ್ಲಿ ಒಂದು "ವರ್ಕ್‌ಷಾಪ್" ಆರಂಭಿಸಿದ. ಮರದ ನೇಗಿಲಿಗೆ ಕಬ್ಬಿಣದ ಅಲುಗುಗಳನ್ನು ಹಾಕಿದರೆ ರೈತನ ಕಷ್ಟಗಳು ಅರ್ಧ ಪರಿಹಾರವಾಗಬಹುದೆಂದು ಅಂತಹ ಅಲುಗುಗಳನ್ನು ತಯಾರಿಸಿದ. ಆದರೆ ಮೊದಲು ತಯಾರಿಸಿದ ಆರೂ, ಎರಡು ವರ್ಷ ಕೊಳ್ಳುವರಿಲ್ಲದೆ ತುಕ್ಕು ಹಿಡಿಯು ವಂತಾಗಿತ್ತು. ಕಡೆಗೆ ಮಿರಜ್ಜಿನ ಒಬ್ಬ ರೈತ ಎಲ್ಲವನ್ನೂ ಕೊಂಡೊಯ್ದ.

ಆಗ್ಗೆ ಬೆಳಗಾಂ ಪೌರಸಭೆಯವರು ಈ ವರ್ಕ್‌ಷಾಪನ್ನು ಮುಚ್ಚಬೇಕೆಂದು ಒತ್ತಾಯಪಡಿಸಿದರು.

ಔಂಧಿನ ಶ್ರೀ ಬಾಲಾ ಸಾಹೇಬ್ ಪಂತ್‌ರವರು ತಮ್ಮ ಸಂಸ್ಥಾನದಲ್ಲಿ ಭೂಮಿಯನ್ನೂ ಮೂಲ ಧನಕ್ಕೆಂದು ೧೦,೦೦೦ ರೂ.ಗಳನ್ನೂ ಕೊಟ್ಟು ಅಲ್ಲಿಗೆ ಬರುವಂತೆ ಕರೆದರು.

ಅಲ್ಲಿಯೇ ಭಾರತಾದ್ಯಂತ ಹೆಸರಾದ ಕಿರ್ಲೋಸ್ಕರವಾಡಿ ಆರಂಭವಾದುದು. ೫೦ ವರ್ಷದ ಮುನ್ನಡೆ. ಪ್ರೊಫೆಸರ್ ಲಕ್ಷ್ಮಣರಾವ್ ಕಿರ್ಲೋಸ್ಕರ್ ಅವರು ನೇಗಿಲ ಕರ್ಮಯೋಗಿಯಾದುದು ಹೀಗೆ.

—ಜಾ.





# ದಾಳಿಂಬೆ ಚಲುವೆ



"ಹೋ! ದಾಳಿಂಬೆ ಚಲ್ವೆ—
ಏನು ದಂತ ಪಂಕ್ತಿಯಲೌ—
ಏನು ಹೊಳಪದು—
ಏನು ಚಲುವದು—ನೋಡಲೌ
ಬೇರಾರು ಬೇಡೆನಗೆ—ಈ ಚಲುವೆ
ಹೊಳೆದಂತೆ ಸಾಕೆನಗೆ—
ಕಾದಿಹೆನು ಈ ನಾರಿಗಾಗಿ.



ಊದು ನೀ ವಾಲಗವ—
ಹೊಡಿಯೋ ಡೋಲನು ಬೇಗ—
ಕಟ್ಟು ಬಾಸಿಗವ ನವಳ ಹಣೆಗೆ—
ಕಟ್ಟುವೆನು ತಾಳಿಯನು ಅವಳಿಗೀಗ—"
ಎಂದು ಹಿಗ್ಗಿದನು ಹಾರಿದನು
ಆ ಹೆಣ್ಣ ಕಂಡು—ಈ ಭೀಮರಾಯ.



ಆದೊಡಂ—ಮನೆಯ ಸೇರಿದ ಮಡದಿ
ಮುಂಜಾನೆ ಎದ್ದವಳೆ ಹೇಳಿದಳು
ಭೀಮನಿಗೆ "ಪ್ರಾಣಕಾಂತಾ!
ಈ ಹಲ್ಲು ಬಲು ಬಿಗಿಯು ಬೇರೆ
ಮಾಡಿಸಿ ಕೊಡಬಾರದೆ?"
ಬಿಚ್ಚಿದ ಬಚ್ಚಬಾಯಿಂದ.





—ಯಜ್ಞಪಶು.



# ಶಾಲಾ ವರದಿ

---

ನಮ್ಮ ಶಾಲೆಯಲ್ಲಿ ಕಳೆದ ವರ್ಷ ೬೦ ಹುಡುಗರೂ ೮೦ ಯುವಕರೂ ೫೦ ಹಿರಿಯರೂ ರಿಜಿಸ್ಟರುಗಳ ಪ್ರಕಾರ ಇದ್ದರು. ಅವರ ಪೈಕಿ ವಿದ್ಯಾಭ್ಯಾಸಂಗ ಮಾಡುತ್ತಿದ್ದವರು, ೧೨ ಉಪಾಧ್ಯಾಯರ ಸಂಖ್ಯೆ ಕೂಡ "ಶಾಲಾ ಬಾಲಕ"ರಿಗೆ ಅನುಕೂಲವಾಗಿಯೇ ಇದ್ದಿತು. ಅಂದರೆ, ೨ ಸ್ಥಾನಗಳು ಖಾಲಿ. ಇಬ್ಬರು ಸದಾ ರಜ; ಹೆಡ್ಮಾಸ್ತರಿಗೆ ಬಲಗೈ ಉಳುಕಿ ಅವರ ಭುಜಬಲ ಉಡುಗಿ ಪಾರ್ಶ್ವವಾಯುವಿಗೆ ತಿರುಗಿತ್ತು.

ಪಠ್ಯ ಪುಸ್ತಕಗಳು ಸಿಗಲಿಲ್ಲವಾಗಿ ಅದನ್ನು ಕೊಂಡುಕೊಳ್ಳುವ ಕಷ್ಟವೇ ತಪ್ಪಿತ್ತು. ಕೂರುವುದಕ್ಕೆ ಕುರ್ಚಿ ಇಲ್ಲದೆ ಮಾಸ್ತರುಗಳ ಕೆಲಸ ನಿಂತೇ ಹೋಯ್ತು. ಸೀಮೆಸುಣ್ಣ ಸಾಂಕ್ಷನ್ನಾಗದೆ, ಕಪ್ಪು ಹಲಗೆಯನ್ನು ಕೆರೆದು ಬಿಳಿ ಮಾಡಿ, ಇದ್ದಿಲಲ್ಲೇ ಗೀಚಿ ಗಣಿತ ಕಲಿಸಲಾಯಿತು. ಕಲಿತದ್ದು ಎಷ್ಟು ಮಂದಿಯೋ ತಿಳಿಯದು.

ಶಾಲೆ ತೆರೆದಿದ್ದ ದಿನ ೩೬೫, ಏಕೆಂದರೆ, ಹೊರಬಾಗಿಲಿಗೆ ಬೀಗ ಚಿಲಕ ಎರಡೂ ಇಲ್ಲ. ಊರಲ್ಲಿ ಜಾಡ್ಯ ಎದ್ದು ಶಾಲೆಗೂ ಹರಡಿತು.

ವಿದ್ಯಾರ್ಥಿಗಳು ಅಕ್ಕ ಪಕ್ಕದ ಹಳ್ಳಿಗಳಿಗೆ ಹೋಗಿ ಅಲ್ಲಿನ ಚರಂಡಿ ದುರಸ್ತು ಮಾಡಿ, ಹಳ್ಳಿಯವರಿಗೆ ಸ್ವಾವಲಂಬನ ಸೂಕ್ತವಲ್ಲ, ಎಂಬ ಪಾಠವನ್ನು ಕಲಿಸಿದರು. ಹೊಸ ಮರಗಳನ್ನು ನೆಟ್ಟು, ಹಳೆಯ ಮರಗಳನ್ನು ಕಡಿಯಲು ಸಹಾಯಮಾಡಿದರು. ನಾಲ್ಕಾರು ಭಾಷಣಗಳನ್ನು ಕೇಳಿ, ತಾವೂ ಮಾತಿನ ಚಾಳಿಗೆ ಬಿದ್ದರು. ಸಿನಿಮಾ ಸಂಗೀತ ಸ್ಪರ್ಧೆಯಲ್ಲಿ ನಾಲ್ಕು ಜನ ಬಹುಮಾನ ಹೊಡೆದರು.

ಘನ ಸರ್ಕಾರದವರು ಈ ಊರಿಗೆ ಒಂದು ಸಿನಿಮಾ ಮಂದಿರವನ್ನೂ ಸಿಗರೇಟ್ ಅಂಗಡಿಯನ್ನೂ ಇನ್ನೊಂದೆರಡು ಹೋಟಲುಗಳನ್ನೂ ಉತ್ತಮವಾದ ಸಲೂನ್ ವಗೈರೆ ದಯಪಾಲಿಸಿದರೆ, ಶಾಲೆಯ ರಿಜಿಸ್ಟರ್‌ನಲ್ಲಿನ ಸಂಖ್ಯೆ ಇಮ್ಮಡಿಸಿ, ಇದೂ ಒಂದು ವಿದ್ಯಾ ಕೇಂದ್ರವಾಗುವುದೆಂಬ ಭರವಸೆ ಇದೆ.

ಅದಕ್ಕಾಗಿ, ಉಪಾಧ್ಯಾಯ ವರ್ಗದವರೂ ಪೋಷಕ ವರ್ಗದವರೂ ಅನವರತ ಶ್ರಮಿಸುತ್ತಿರುವುದು ಸ್ತುತ್ಯಾರ್ಹ.

— ರೇವಣ್ಣ.

# ಪಂಚ ರಾತ್ರಿ ಪ್ಲಾನ್

---

ನಮ್ಮ ಹಳ್ಳಿ ಮಾರ್ಗವಾಗಿಯೇ ನೆಹರೂಜೀ ಬೇಲೂರಿಗೆ ಹೋಗ್ತಾರೆ ಅನ್ನೋದು, ಸಾಲು ಮರದ ಸೊಂಟಕ್ಕೆಲ್ಲಾ ನಾವು ಹಚ್ಚಿದಾಗಲೇ, ನನಗೆ ಗೊತ್ತಾಯಿತು. ಇಂತಹ ಸಂದರ್ಭ ಜೀವಮಾನದಲ್ಲಿ ಒಮ್ಮೊಮ್ಮೆ ಸಿಗೋದು, ಇದನ್ನು ಆರ್ಥಿಕ ಪ್ರಗತಿಗೆ ಹೇಗಾದರೂ ಪಾಲಿಸಬೇಕು ಎಂದು ಆಗಲೇ ನಿರ್ಧಾರ ಮಾಡಿದೆ. ಇಂತಹ ಯೋಜನೆಗಳಿಗೆಲ್ಲಾ ನಮ್ಮ ಶಾಮಣ್ಣ ನನ್ನ ಬಲಗೈ. ಇಬ್ಬರೂ ಇಸ್ಪೀಟಿಗೆ ಕೂತರೆ, ಎದುರಾಳಿಗಳು ಆಟ ಗೆದ್ದರೂ, ಕಾಸು ಕಳೆದುಕೊಳ್ಳುವುದನ್ನು ಖಂಡಿತ ಮಾಡುವ ಸಾಹಸಿ ಶಾಮಣ್ಣ. ಅವನಿಗೆ ತಿಳಿಸಿದೆ ಈ ಸುಸುದ್ದೀನ. ಅವನಂದ: ಹಾಗಾದರೆ ಪ್ರಸಾದ್, ಷಹರಿನಲ್ಲಿ ಮಾಡೋಹಾಗೇ ಇಲ್ಲೂ ನಾವೊಂದು ಸಾರ್ವಜನಿಕ ಸಭೆ ಏರ್ಪಡಿಸೋಣ. ಹಳ್ಳಿ ಹಳ್ಳಿಯ ಕುಳಗಳಿಗೆಲ್ಲಾ, ಷಹರಿನಲ್ಲಿ ಮಾಡೋಹಾಗೇ ಈ ಸಾರ್ವಜನಿಕ ಸಭೇಗೆ ಆಹ್ವಾನವನ್ನು ಒಂದಕ್ಕೆ ಐದು ರೂಪಾಯಿನಂತೆ ಕಳಿಸೋಣ. ತ್ರಿವರ್ಣದ ಆಹ್ವಾನ ಪತ್ರಿಕೆ ಕೈಗೆ ಬಂದರೆ ಯಾವ ಕುಳತಾನೇ ಐದು ರೂಪಾಯಿಗೆ ಹಿಂದೆಗೀತಾನೆ? ಬೆಂಗಳೂರಲ್ಲಿ ಇಂತಹ ಆಹ್ವಾನ ಪತ್ರಿಕೆಗೆ ಒಂದೊಂದು ಸಲ ಐವತ್ತೂ ಕೂಡ ಕೊಟ್ಟಿದ್ದಾರಂತೆ ಜನ! ನಾವು ಐದು ರೂಪಾಯಿ ಅಂತ ವಸೂಲ್ಮಾಡೋಣ. ಏನಿಲ್ಲ ಅಂದರೂ ಖರ್ಚು ಜಾತಾ ಐದು ಸಾವಿರ ಗಿಟ್ಟಬಹುದು ಇಸ್ಪೀಟಿನಲ್ಲಿ ಅಡವಿಟ್ಟ ತೋಟ ಈಗ ಬಿಡಿಸಿ ಕೊಳ್ಳಬಹುದು.” ಅಂತ.

“ಅಲ್ಲವೋ ಶಾಮಣ್ಣ! ಸೇಂದಿ ಕಂಟ್ರಾಕ್ಟು ಬಾಬ್ತು ನಾವು! ನಾವು ಹೋಗಿ ನಮ್ಮ ಹಳ್ಳೀಲಿ ‘ನೆಹ್ರೂ ಭಾಷಣ, ಹೇಗೆ ಏರ್ಪಡಿಸೋದು. ನಾನು ಹಾಗೆ ಯೋಜನೆ ಮಾಡಲಿಲ್ಲ. ರಸ್ತೆ ಪಕ್ಕದಲ್ಲಿ ಸ್ಕೂಲು ಬೆಂಚುಗಳು ಹಾಕಿ, ಒಂದು ಚಪ್ಪರ ಕಟ್ಟಿ ಆತನಿಗೆ ಒಂದು ಹೂವಿನ ಹಾರ ಹಾಕಿ, ಬೆಂಚಿಗಿಷ್ಟು ಅಂತ ದುಡ್ಡು ಕೇಳೋಣ ಅಂತಿದ್ದೆ. ಒಂದು ತಿಂಗಳು ಸಾಯಂಕಾಲ ಶಾಖಾಯ ಲವಣಾಯಕ್ಕೆ ಸಾಕು ಅಂತ. ನೀನು ಹೇಳೋದು ನೋಡಿದರೆ, ಅಡಿಕೆ ತೋಟಾನೇ ಬಿಡಿಸಿಕೊಳುಕ್ಕೆ ಕೈ ಚಾಚ್ತಾ ಇದ್ದೀ! ಅದು ಹೇಗೆ” ಎಂದೆ.

ಆಗ ಶಾಮಣ್ಣ ತನ್ನ 'ಸಂಜೆ ರಾತ್ರಿ ಪ್ಲಾನ್' ವಿವರಿಸಿದ. ಐದೇ ರಾತ್ರಿಗಳು ಉಳಿದಿತ್ತು ನೆಹ್ರೂಜೀ ಆ ರಸ್ತೇಲಿ ಅಡ್ಡಾಡೋದಕ್ಕೆ "ನೋಡು. ನೆಹ್ರೂಜೀ ಈ ರಸ್ತೇಲಿ ಹೋಗೋದು ಬೆಳಿಗ್ಗೆ ಎಂಟು ಎಂಟೂವರೆಗೆ. ನಾವು ಈ ಸಭೇನ ಸಾಯಂಕಾಲ ಆರು ಆರೂವರೆಗೆ ಏರ್ಪಡಿಸೋಣ. ಹತ್ತಡಿ ಎತ್ತರ ದಲ್ಲಿ ಒಂದು ಅಟ್ಟ ಕಟ್ಟೋಣ, ಷಿಕಾರೀಗೆ ಮಚಾನ್ ಕಟ್ಟಿದಂತೆ. ಮೂರು ಮೂರು ರಂಗನ್ನೂ ಮೂಲೆ ಮೂಲೇಲಿ ಚೆಲ್ಲೋಣ. ಒಂದು ಮೈಕ್ರೋ ಫೋನ್ ವ್ಯವಸ್ಥೆ ಮಾಡಿಸೋಣ. ನನ್ನ ಸೋದರಳಿಯನಿಗೆ ಅದೇ ಕಸುಬು ಬೆಂಗಳೂರಲ್ಲಿ. ಅರ್ಧ ಗಂಟೆ ಸಭೆ ಏರ್ಪಡಿಸೋಣ. ಪಟೇಲನ ಚಿಕ್ಕ ಮಗಳ ಕೈಲಿ ಸ್ವಾಗತ ಹಾಡಿದರೆ, ಪಟೇಲ ನೂರಾದರೂ ಕಕ್ಕುತ್ತಾನೆ. ಕುರುಬರ ಈರಯ್ಯನ ಕೈಲಿ ಸ್ವಾಗತ ಭಾಷಣ ಮಾಡಿಸಿದರೆ ಆತ ಐನೂರಾದರೂ ಕೊಡ್ತಾನೆ. ಮೊನ್ನೆ ತಾನೇ ಗಡಿಯಾಚೆಯಿಂದ ಇನ್ನೂರು ಕುರಿಮಂದೆ ಈ ಕಡೆಗೆ ಕಾಸಿಲ್ಲದೆ ಸಾಗಿಸಿದ್ದಾನೆ.

"ಅಲ್ಲಾ ಶಾಮಣ್ಣ! ಕೂಸು ಹುಟ್ಟುಕ್ಕೆ ಮುಂಚೆ ಕುಲಾವಿ ಹೊಲಿಸಿ ದರು ಅಂತ. ನೆಹ್ರೂಜೀ ಇಲ್ಲಿಗೆ ಬರೋಹಾಗೆ ಹೇಗೆ ಮಾಡೋದು?

'ಅದಿರಲಿ ಪ್ರಸಾದ್! ಅದು ನನಗೆ ಬಿಡು. ಮಿಕ್ಕ ಯೋಜನೆ ಸಿದ್ಧ ಆದರೆ ಇದೇನು ಮಹಾ! ಮಿಕ್ಕ ಅಣಿಯೆಲ್ಲಾ ಸರಿಯಾಗಿ ಮಾಡೋಣ ಅಂದ. ಹಾಗೇ ಇಬ್ಬರು ಪತ್ರಿಕಾ ಪ್ರತಿನಿಧಿಗಳು, ಒಬ್ಬ ಫೋಟೋಗ್ರಾಫರ್, ಇರಲೇ ಬೇಕು. ಬಂದ ಮಕ್ಕಳಿಗೆ ಹಂಚುಕ್ಕೆ ಒಂದಿಷ್ಟು ಪೆಪ್ಪರಮಿಂಟ್. ಅದನ್ನ ನೆಹ್ರೂಜಿ ಹುಡುಗರಿಗೆ ತಮ್ಮ ಅಮೃತ ಹಸ್ತದಿಂದಲೇ ಕೊಡೋಹಾಗೆ ಮಾಡ ಬೇಕು. ಒಟ್ನ ನಾವು ಕೈಯಿಂದ ಮೊದಲು ಇನ್ನೂರು ಪೀಕಬೇಕು, ನೀನು ನೂರು ಹಾಕು, ನಾನು ನೂರು ಹಾಕ್ತೀನಿ. ಬಂದಿದ್ದರಲ್ಲಿ ಇಬ್ಬರೂ ಸಮ ಸಮ ಅಂದ.

"ಒಪ್ಪಿದೆ ಶಾಮಣ್ಣ! ಆದರೆ. ನೆಹ್ರೂಜೀನ ಹೇಗೆ ಕರಕೊಂಡು ಬರ್ತಿ. ಅವರಿರೋ ಬಂಗಲೇ ಆಚೆ, ಕಾಂಪೌಂಡಾಚೆ, ಒಂದು ಫರ್ಲಾಂಗ್ ಕೂಡ ಯಾರನ್ನೂ ಸೇರಿಸುಲ್ಲ. ನಿನ್ನ ಮಾತು ಕೇಳಿಕೊಂಡು, ನಾನು ಹ್ಞೂ ಅಂದು ಇದೆಲ್ಲಾ ಮಾಡಿದರೆ, ನೆಹ್ರೂ ಬರದೇ ಇದ್ದರೆ, ಬಂದವರೆಲ್ಲಾ ಅದೇ ಮಚಾನ್‌ಗೆ ನಮ್ಮನ್ನೇ ಸಿಗಿದು ತೋರಣ ಕಟ್ಟಿಬಿಡ್ತಾರಲ್ಲ! ಇದು ಯೋಚಿಸ ಬೇಕಾದ ವಿಷಯ ಅಲ್ಲವೆ! ಅಂದೆ"

ಆಗ ಶ್ಯಾಮಣ್ಣ ಅಂದ. ನನ್ನ ಸೋದರಳಿಯ, ಬೆಂಗಳೂರಲ್ಲಿ ಧ್ವನಿ ವರ್ಧಕದವ ಅಂದೆನಲ್ಲಾ ಅವನ್ನ ನಾವು ಕೆಂಪು ಶಾಮಣ್ಣ ಅಂತೀವಿ, ನನಗಿಂತ

ಐದು ವರ್ಷ ದೊಡ್ಡೋನು. ಅವನು ಈಗ ನಮ್ಮನೇಗೆ ಬಂದಿದ್ದಾನೆ. ಅವನೂರಲ್ಲಿ ಅಕ್ಕೀಗೆ ಕಷ್ಟ. ಒಂದು ಹತ್ತು ಸೇರು ಹಳ್ಳಿಯಿಂದ ತೊಗೊಂಡು ಹೋಗೋಣ ಅಂತ. ಅವನನ್ನು ನೋಡಿದಾಗಲೇ ನನ್ನ ಸಮಸ್ಯೆ ಹರಿಯಿತು. ನೀನು ಬಾ ಅವನನ್ನು ನೋಡೋವಂತೆ. ಅಂತ ಅವನ ಮನೇಗೆ ಕರಕೊಂಡು ಹೋದ. ಹಜಾರದಲ್ಲಿ ನನ್ನ ಕೂರಿಸಿ ಒಳಕ್ಕೆ ಹೋದ. ಐದು ನಿಮಿಷ ಆದ ಮೇಲೆ ಒಳಗಿಂದ ಶಾಮಣ್ಣ, ನೆಹ್ರೂಜೀ ಇಬ್ಬರೂ ಬಂದರು ನನಗೆ ಕಣ್ಣೇ ನಂಬುಕ್ಕಾಗಲಿಲ್ಲ. ಭಾರತದಲ್ಲಿ ಯಾರು ತಾನೇ ನೆಹ್ರೂಜೀ ಫೋಟೋ ನೋಡಿಲ್ಲ! ಥೇಟ್ ಫೋಟೋದಂತೆಯೇ ಇದ್ದ, ಎದುರಿಗೆ ಬಂದವ. ನೋಡಿದ ತಕ್ಷಣ. ಕೈ ಮುಗಿದು, ನಮಸ್ತೆ ನೆಹ್ರೂಜೀ" ಅಂದಮೇಲೇ ಇದು ಮೋಸ ಅಂತ ನನಗೆ ತಿಳಿದು ನಾನು ಮುಗಿದ ಕೈ ಬಿಡಿಸಿಕೊಂಡು ಕೈ ಕೈ ಹಿಸುಕಿಕೊಂಡೆ.

ಇದೆಲ್ಲವನ್ನೂ ಶಾಮಣ್ಣ ನೋಡಿದ.

ಈಗೇನಂತಿ? ನೆಹ್ರೂಜೀ ಸಿದ್ಧ. ಬೆಂಗಳೂರಲ್ಲಿ ಆಡೋ ಜಟ್ಕಾ ಹಿಂದೂಸ್ಥಾನಿ ಬರುತ್ತೆ ಇವನಿಗೆ. ನಮ್ಮ ಹಳ್ಳಿ ಕಡೆ ಯಾರಿಗೂ. ಹಿಂದಿ ಯಾವುದು, ಹಿಂದೂಸ್ಥಾನಿ ಯಾವುದು, ತಿಳಿಯುಲ್ಲ. ಹಿಂದೀಲಿ ಅವನ ಭಾಷಣ. ಕನ್ನಡದಲ್ಲಿ ನನ್ನ ತರ್ಜುಮೆ. ಸಾಯಂಕಾಲದ ಹೊತ್ತು ಯಾರಿಗೂ ತಿಳಿಯದಹಾಗೆ ನೋಡಿಕೊಳ್ಳೋಣ. ಹೋಗುಕ್ಕೆ ಬರುಕ್ಕೆ ನಮ್ಮ ಬುಡನ್‌ಸಾಬಿ ಜೀಪ್ ಹೇಗೂ ಇದೆ.

ಇನ್ನೇನು ಅನುಮಾನ ಇಲ್ಲವಲ್ಲಾ! ಅಂದ.

ಒಂದುನೂರು ರೂಪಾಯಿ ಬೆಲೆ ಬಾಳುವ ಕೈ ಉಂಗುರ ಅವನ ಕೈಲಿ ಕೊಟ್ಟೆ. ನಿನ್ನ ಜತೆಗೆ ನಾನು ಸಿದ್ಧ ಎಂದೆ.

ಉಳಿದ ನಾಲ್ಕು ರಾತ್ರಿಯಲ್ಲಿ ಸೊಗಸಾದ ಏರ್ಪಾಡು ಆಯಿತು. ಬೆಳಗ್ಗೆ ೮ ೮-೩೦ಗೆ ರಾಷ್ಟ್ರ ಧ್ವಜದ ಕಾರೊಂದು ಮುಂಬಾಲಿಗ ಹಿಂಬಾಲಿಗ ಕಾರುಗಳೊಂದಿಗೆ ಆ ರಸ್ತೆಯಲ್ಲಿ ಹೋದುದನ್ನು ನಾನೂ ಶಾಮಣ್ಣ ನೋಡಿದೆವು. ಸಾಯಂಕಾಲ ೬ ಕ್ಕೆ ಅಂತ ನಮ್ಮ ಪ್ರಚಾರ ಲಕ್ಷಣವಾಗಿಯೇ ನಡದಿತ್ತು. ಸ್ವಾಗತ ಗೀತ, ಸ್ವಾಗತ ಭಾಷಣ. ಭಾಷಣ. ಎಲ್ಲವೂ ಸಾಂಗವಾಗಿ ಆಯಿತು. ನಮ್ಮ ನೆಹ್ರೂಜಿ ಭಾಷಣ. ಅವನಂದಿದ್ದು ನಂಗೆ ತಿಳೀದು. ಅದನ್ನ ಕನ್ನಡದಲ್ಲಿ ತರ್ಜುಮೆ ಮಾಡಿದೆ. ಅದಕ್ಕೆ ತಯಾರೀನೂ ತೆಗೆದುಕೊಂಡಿದ್ದೆ. ಎರಡು ವರ್ಷದ ಹಿಂದೆ ಅವರು ಮಾಡಿದ ಒಂದು ಭಾಷಣ ಸ್ವಲ್ಪ

ಹೆಚ್ಚು ಕಡಿಮೆ ಘಟ್ಟ ಮಾಡಿದ್ದೆ. ಆವತ್ತು ಅದನ್ನು ಒಪ್ಪಿಸಿ ಬಿಟ್ಟೆ. ಫೋಟೋಗಳನ್ನೆಲ್ಲಾ ತೆಗೆದಾಯ್ತು. ಮೂರು ದಿನಗಳಮೇಲೆ ಷಹರಿನ ಪತ್ರಿಕೆಗಳಲ್ಲಿ ಸಂಪೂರ್ಣ ವಿವರಗಳು ಪ್ರಕಟಿಸಲ್ಪಟ್ಟಿತ್ತು. ಅಮೋಘವಾದ ಭಾಷಣದ ವಿವರಗಳೂ ಬಂದಿತ್ತು ಸ್ವಾಗತಾಧ್ಯಕ್ಷರ ಫೋಟೋ ಕೂಡ ಪತ್ರಿಕೆಗಳಲ್ಲಿ ಬಿದ್ದಿತ್ತು. ನಮ್ಮ ಚೀಲಕ್ಕೆ ಇದಕ್ಕಾಗಿ ಐದುನೂರು ಬಿದ್ದಿತ್ತು.

ಶಾಮಣ್ಣ ಅಡಿಕೆ ತೋಟ ಬಿಡಿಸಿಕೊಂಡ. ನಾನು ಮಗಳ ಮದುವೇಗೆ ವರದಕ್ಷಿಣೆ ಕೂಡ ಸಿದ್ಧ ಮಾಡಿಕೊಂಡಿದೀನಿ.

ಇದಾಗಿ ಇಷ್ಟು ದಿನ ಆಯ್ತು ನೋಡಿ, ಯಾರಿಗೂ ಇದರ ಸುಳಿವೇ ಗೊತ್ತಾಗಿಲ್ಲ. ನಾನು ಮರೆತು ಹೇಳಿದರೆ ಯಾರೂ ನಂಬೋದೂ ಇಲ್ಲ.

ಆದರೆ, ಶಾಮಣ್ಣನ ಸೋದರಳಿಯ ಈಗ ದೆಹಲಿಗೆ ಪ್ರಯಾಣ ಬೆಳೆಸಿದ್ದಾನೆ. ನೆಹ್ರೂಜೀನ ನೋಡುಕ್ಕೆ ಅಂತ. "ಹಿಟ್ಲರನಿಗೆ ೧೭ ಜನ ಹಿಟ್ಲರ ಪ್ರತಿ ರೂಪಗಳಿದ್ದರು. ಅದಕ್ಕೇ ಅಷ್ಟು ಕೆಲಸ ಮಾಡುತ್ತಿದ್ದ ಸುರಕ್ಷಿತವಾಗಿ, ನಿಮಗೆ ನಾನು ಪ್ರತಿರೂಪಿಯಾಗಿ ಸಣ್ಣ ಪುಟ್ಟ ಕೆಲಸಕ್ಕೆ ಸಿದ್ಧವಾಗುತ್ತೇನೆ" ಎಂದು ಕೆಲಸ ಕೇಳುಕ್ಕೆ ಹೋಗಿದ್ದಾನೆ.

—ಪ್ರಸಾದ್.




ನೆಹ್ರೂ ಬೇಲೂರಿಗೆ ಹೋದ ದಿನ ನಮ್ಮ ಚಿತ್ರಕಾರನ ಕನಸು.

# ಸೀಟಿನ ಬೇಟೆ

ಬಿಡೆ ನಿನ್ನ ಕಾಲೇಜ, ಬಿಂಕವಿದ್ಯಾಕೋ
ಕೊಡು ಒಂದು ಸೀಟನು, ಕೋಪವಿದೇಕೊ ||

ರೂಲ ಪೊಕ್ಕರೆ ಬಿಡೆ, ಲಿಸ್ಟಿನೊಳು ಇನ್ನು
ಖಾಲಿ ಇಲ್ಲಾ ಎಂದು ಒದ್ದರು ಬಿಡೆನೋ || ಬಿಡೆ

ತೋರೆ ಸರ್ಕಾರದ ಜೀಬವನೂ ಬಿಡೆ
ಘೋರ ರೂಪವ ತಾಳಿ ಘುಡಿ ಘುಡಿಸಿದರೂ ಬಿಡೆ || ಬಿಡೆ

ತಿರುಕನೆಂದರೂ ಬಿಡೆ, ಹರಕನೆಂದರೂ ಬಿಡೆ,
ತೋರಿ ನಂಜಾತಿಯು ದೂರಿ ಬೈದರೂ ಬಿಡೆ || ಬಿಡೆ

ಸಕಲ ಬಾಗಿಲ ಹಾಕಿ ಮನೆಯ ಸೇರಲು ಬಿಡೆ,
ರೆಕಮೆಂಡೇಷ ಶತ ಹರಿದು ಹಳಿದರೂ ಬಿಡೆ || ಬಿಡೆ

ಕಡು ಭರ್ತಿಯಾಗಿ ಇನ್ನು ಕಾಣಲೇ ಬೇಡ ಎಂದು
ಒಡನೆಯೆ ಕಾರೇರಿ ಓಡಿದರೂ ಬಿಡೆ || ಬಿಡೆ

ತಂದೆ ಎನಿಸಿಕೊಂಡ ಆ ತಪ್ಪಿಗಾಗಿ ನನ್ನ
ಒಂದೆ ಹುಡುಗನನ್ನ ಓದಿಸೋ ಸಲುವಾಗಿ ||

---

## ಸಮಸ್ಯೆ

ಸಾವಿರ ಕಾಲು ಮಾವಿನ ಮರದಡಿ,
ಸರ ಸರ ಸರ ಹೊರಟಿತ್ತು;
ಎದುರಿಗೆ ಬಂದಾ ಕಂಬಳಿ ಹುಳವು
"ಎಲ! ಎಲ! ನಿಲ್ಲೋ!" ಎಂದಿತ್ತು;
"ಯೋಚನೆ ಮಾಡೋ, ಜಾಣಾ, ನಿನ್ನಯ
ಕಾಲಲಿ ಯಾವುದು ಮೊದಲಿನದು?
ನಂತರ ಯಾವುದು, ಹಿಂದಿನದಾವುದು?
ಮೂರು, ನಾಲ್ಕು, ಐವತ್ತು?"
ಸಾವಿರ ಕಾಲೀ ಗಣಿತವ ಮಾಡುತ
ನಿಂತಲ್ಲೇ ಉಸಿರ್ ನೀಗಿತ್ತು.

# ಪಕ್ಕದ ಮನೆ

---

ಬೆಂಗಳೂರು ಮುಂತಾದ ನಗರಗಳಲ್ಲಿ ಜನಕ್ಕೆ ನೆರೆಹೊರಕೆ ಎಂಬುದೇ ಇಲ್ಲ. ಪಕ್ಕದ ಮನೆಯಲ್ಲಿ ಯಾರುವಾಸವಾಗಿದಾರೆ, ಅವರ ಆಗುಹೋಗುಗಳೇನು, ಅವರ ಕಷ್ಟನಿಷ್ಠುರಗಳೇನು, ಎಂಬುದನ್ನು ಯಾರೂ ಅರಿಯರು ಎಂದೆಲ್ಲ ಸಾಮಾನ್ಯವಾಗಿ ದೂರುವುದುಂಟು. ಆದರೆ, ಈ ದೂರು ಸತ್ಯಕ್ಕೆ ಬಹುದೂರ. ನನ್ನ ಅನುಭವ ಇದಕ್ಕೆ ತೀರ ವಿರೋಧ.

ಏಕೆಂದರೆ, ನನ್ನ ಪಕ್ಕದ ಮನೆ ಆಸಾಮಿಗೆ ೩ನೇ ತಾರೀಖಿಗೇನೇ ಸಂಬಳ ಸಿಕ್ಕಿಬಿಡ್ತದೆ ಎಂಬುದನ್ನು ನಾನು ಪತ್ತೆ ಹಚ್ಚಿದೇನೆ. ಆ ದಿನ ಸಂಜೆ ಅವರನ್ನು ಐದು ರೂಪಾಯಿ ಸಾಲ ಕೇಳಿ ಪ್ರತಿ ತಿಂಗಳೂ ತಪ್ಪದೆ ಪಡೆದು ತರುತ್ತಿರುವ ಭೂಪ ನಾನು. ಅವರು ಇಂಗ್ಲೀಷ್ ಪೇಪರು ತರಿಸುತ್ತಾರೆ, ರಾತ್ರಿ ಹೊತ್ತಿಗೆ ಅದನ್ನು ಓದಿ ಮುಗಿಸುತ್ತಾರೆ, ಎಂದು ನಾನು ಕಂಡುಹಿಡಿದಿದೇನೆ. ನನ್ನ ಊಟ ಮುಗಿಯುತ್ತಲೂ, ನಾನು ಅದನ್ನು ಮೆತ್ತಗೆ ಅವರಿಂದ ಎರವಲು ತಂದು ದಿನವೂ ಓದುತ್ತಿದೇನೆ. ಅವರು ಸೋಷಲಿಸ್ಟ್ ಅಲ್ಲ, ತಂಡನ್ನರನ್ನು ಕಂಡರೆ ಅವರಿಗಾಗದು, ಹಿಂದೂ ಮಹಾ ಸಭೆ ಕಡೆ ಅವರ ವಾಲುವಿಕೆ ಜಾಸ್ತಿ, ಚಿನ್ನ ಬೆಳ್ಳಿ ಬೆಲೆ ಏರಿಳಿತ ಅವರ ಆಸೆ ಕೆರಳಿಸುತ್ತದೆ. ತಾತಾ ಕಂಪನಿಯಲ್ಲಿ ಅವರಿಗೆ ಷೇರಿದೆ, ಚಕ್ರಬಂಧ ಸ್ಪರ್ಧೆ ಎಂದರೆ ಅವರಿಗೆ ನಿತ್ಯಹುಚ್ಚು ಎಂಬುದನ್ನೆಲ್ಲ ನಾನು ಅವರು ಆ ದಿನ ಪತ್ರಿಕೆಯ ಖಾಲಿ ಜಾಗಗಳಲ್ಲಿ ಮಾಡುವ ಗುರುತುಗಳಿಂದ ತಿಳಿದುಕೊಂಡಿದೇನೆ. ಹಾ, ಛೆ, ಅಯ್ಯೋ ದೇವರೇ, ಹೀಗೂ ಉಂಟೆ—ಎಂದೆಲ್ಲ ಅವರು ಪೇಪರಲ್ಲಿ ಗೀಚಿ ಗೋಳಾಡಿ ಚಕಿತಪಡುವರು. ಈ ಅಭ್ಯಾಸದಿಂದ ನನಗೆ ಅವರ ಅಂತರಂಗ ಪರಿಚಯ ಚೆನ್ನಾಗಿ ದೊರೆತಿದೆ.

ಹಾಗೆಯೇ ಅವರು ಉತ್ತಮ ಕಾಫೀ ಭಕ್ತರೆಂಬುದೂ ನನಗೆ ಗೊತ್ತು. ಅವರ ಮನೆಯಿಂದ ಆಗಾಗ ಕಾಫಿ ಪುಡಿ ಎರವಲು ತಂದೇ ನನ್ನ ದಾಹ ಪರಿಹಾರ. ನಾವು ತರುವ ಪುಡಿಯನ್ನು ಬಟ್ಟಲಲ್ಲಿ ತುಂಬಿ ಹಿಂದಕ್ಕೊಪ್ಪಿಸಿದಾಗ. ಆತನ ಪತ್ನಿ "ಇದು ನಮ್ಮ ಯಜಮಾನರಿಗೆ ಹಿಡಿಸೋಲ್ಲ—ಬೇಡ—

ತುಂಬಾ ಹೊಲಸು ಪುಡಿ—ನೀವೇ ಇಟ್ಟುಕೊಳ್ಳಿ" ಎಂದು ಸಂತೋಷವಾಗಿ ವಾಪಸ್ ಕಳುಹಿಸುವರು. ಅದೂ ನನ್ನ ಭಾಗ್ಯವೇ ಸರಿ.

ಅವರ ಮನೆಯಲ್ಲಿ ಯಾರು ಯಾರಿಗೆ ನೆಗಡಿ, ಕೆಮ್ಮಲು, ಯಾವ ಅಳಿಯಂದಿರು ಅನ್ಯೋನ್ಯವಾಗಿದ್ದಾರೆ, ಯಾವ ಪಾತ್ರೆ ಒಡೆಯುತ್ತದೆ, ಯಾವತ್ತು ತಂದೆಯ ತಿಥಿ, ಯಾವಾಗ ಹೊಸ ಸೀರೆ ತಂದರು, ಎಂದೆಂದು ಈರುಳ್ಳಿ ಹುಳಿ ಮಾಡುತ್ತಾರೆ, ಯಾವ ದಿನ ಪುದೀನಾ ಚಟ್ನಿ ಅರೆಯುತ್ತಾರೆ, ಯಾವ ಖಾಯಿಲೆಗೆ ಯಾವ ಡಾಕ್ಟರು ಬರುತ್ತಾರೆ, ಪರೀಕ್ಷೇಲಿ ಯಾವ ಹುಡುಗನಿಗೆ ಫೆಯಿಲು, ಯಾವ ಹುಡುಗಿಗೆ ಪಾಸು — ಇವೆಲ್ಲ ನಾನು ಬಲ್ಲೆ.

ಅವರ ಮನೆ ರೇಡಿಯೋ ನನ್ನ ಕಿವಿ ಚುಚ್ಚುತ್ತೆ. ಅವರ ಮನೆ ಹುಡುಗರಿಗೆ ಯಾವ ಯಾವ ಸಿನಿಮಾ ಹಾಡುಗಳು ಇಷ್ಟ ಎಂದು ನಾನು ಬೇಕಾದರೆ, ನಿಮಗೆ ಪಟ್ಟಿ ಕೊಡಬಲ್ಲೆ. ಅವರ ಎರಡನೆಯ ಮಗ ಸಿಗರೇಟು ಸೇದುತ್ತಾನೆ, ಮೂರನೆಯವನಿಗೆ ಕೋಳಿಮೊಟ್ಟೆ ಎಂದರೆ ಪ್ರೀತಿ, ಎರಡನೆಯ ಹುಡುಗಿಗೆ ಪಿಟೀಲು ಸುತರಾಂ ಬರುವುದಿಲ್ಲ, ಕೊನೆಯ ಮಗುವಿಗೆ ಕಜ್ಜಿ, ಎರಡನೆಯ ಸೊಸೆಗೆ ಗೂರಲು, ಮೊದಲನೆಯವಳಿಗೆ ತವರು ಮನೆ ಬೆಂಬಲವಿಲ್ಲ ಇವೆಲ್ಲಕ್ಕೂ ನಾನು ಕೋರ್ಟಿನಲ್ಲಿ ರುಜುವಾತು ಕೊಡಬಲ್ಲೆ.

ಇಷ್ಟು ಸಮಾಚಾರ ನನಗೆ ಗೊತ್ತಿದ್ದರೂ, ನನಗೆ ಅವರ ಮನೆ ನೆರೆಮನೆ. ನಾನಿರುವುದು ಗಾಂಧೀನಗರ.

ಅಂದ ಮೇಲೆ, ನಗರಗಳಲ್ಲಿ ನೆರೆ ಹೊರಕೇನೇ ಇಲ್ಲ ಎಂದು ಜನ ಅಂತಾರಲ್ಲಾ, ಅದೇ ನನಗೆ ಆಶ್ಚರ್ಯ.

— ಶಾಟಾಳಿ.



# ಪ್ಯಾರಿಸ್ ದೋಭೀ ಕಾರ್ಯಾಲಯ

---

"ಬೆಂಗಳೂರಿಗೆ ನೆಹ್ರೂ ಬಂದರು. ೧೦ ದಿವಸ ನಮ್ಮೂರಿನಲ್ಲಿರುತ್ತಾರೆ" ಅಂದಿದ್ದನ್ನ ಕೇಳಿ ನಮ್ಮ ದೋಭಿ ಯನ್ನಯ್ಯ ತನ್ನ ಬಟ್ಟೇನೆಲ್ಲಾ ಗರಿಗರಿಯಾಗಿ ಇಸ್ತ್ರಿಮಾಡಿಟ್ಟುಕೊಂಡ. ತನ್ನ ದುಕಾನಿನ ಬೋರ್ಡನ್ನ ಹೊಸದಾಗಿ ದೊಡ್ಡದಾಗಿ ಬರೆಸಿದ. ತನ್ನ ಅಂಗಡಿಯ ವಿಚಾರ ಸ್ವಲ್ಪ ಹೊಗಳಿಕೊಂಡು, ದೊಡ್ಡ ದೊಡ್ಡ ಪತ್ರಿಕೆಗಳಲ್ಲಿ ಜಾಹೀರಾತು ಕೊಟ್ಟ.

ತನ್ನ ಕಾರ್ಯಾಲಯದ ಬಾಗಿಲಲ್ಲಿ ಆ ದಿನ ಒಂದೇ ಸಮನೆ ಕೂತಿದ್ದ. "ಏನು ಯನ್ನಯ್ಯಾ! ನೆಹ್ರೂ ನೋಡೋಕೆ ಹೋಗಲಿಲ್ವಾ ಇಲ್ಲೇ ಅಂಗಡಿ ಬಾಗಲಲ್ಲೇ ಕೂತಿದ್ದಿ. ಏಕೆ?" ಎಂದೆ.

"ನಮ್ಮಂಗಡೀಗೆ ನೆಹ್ರೂ ಬರಬೇಕು. ಅಂಥಾದ್ದರಲ್ಲಿ ಅವರು ಬಂದಾಗ ನಾನು ಇಲ್ಲದೇ ಹೋದರೆ ಹೆಂಗೆ" ಎಂದ.

"ಹಾಗಂದರೆ! ಅರ್ಥವಾಗಲಿಲ್ಲ" ಅಂದೆ.

"ಇಷ್ಟು ಗೊತ್ತಿಲ್ವಾ—ನೆಹ್ರೂಜಿ ಬಟ್ಟೆ ಬರೇನೆಲ್ಲಾ ಪ್ಯಾರಿಸ್‌ಗೆ ಕಳಿಸಿ ಒಗಿಸಿ ಇಸ್ತ್ರಿಮಾಡಿಸ್ತಾ ಇದ್ದರು ಅನ್ನೋದು. ನಾಚಿಕೆ ಪಟ್ಟುಕೊಂಡು ಹಾಗೆ ಮಾಡಲಿಲ್ಲ ಅಂತೇನೋ ಬರಕೊಂಡರು. ಆದರೂ ಇವತ್ತಿಗೂ ಅವರು ಪ್ಯಾರಿಸ್ ದೋಭಿ ಕಾರ್ಯಾಲಯದಲ್ಲೇ ಬಟ್ಟೆ ಕೊಡೋದು. ನನ್ನ ಅಂಗಡೀಗೂ ಅದೇ ಹೆಸರು. ಪೇಪರಿನಲ್ಲಿ ಓದಿರಲೇಬೇಕು, ಬರ್ತಾರೇನೋ ಅಂತ ಇಲ್ಲೇ ಕಾದಿದ್ವಿ" ಅಂದ.

ಇನ್ನೊಂದು ದಿವ್ಸ ತಾನೇ ಅಂತ ನಾನೂ ಕಾದೆ ಅವನ ಜತೇಲಿ, ಅವನ ಸಿಗರೇಟು ಮುಗಿಯೋತನಕ.

---

# ಲೇಖನಿಯ ಬೆಲೆ

---

ಹೋದ ಶನಿವಾರ ನಮ್ಮ ಮನೆಗೆ ಸುಬ್ಬರಾಮು ಬಂದಿದ್ದ; ಭಾನು ವಾರಾನೂ ನಮಲ್ಲೇ ಇದ್ದ.

ಸುಬ್ಬರಾಮು ಗೊತ್ತಿಲ್ಲವೆ ನಿಮಗೆ? ಭಾರಿ ಕತೆಗಾರ. ಅಂದರೆ, ವಾರ ಪತ್ರಿಕೆ ಕತೆಗಾರ. ಮಾಸ ಪತ್ರಿಕೆ ಕತೆಗಾರ ಮಟ್ಟಕ್ಕೆ ಅವನಿನ್ನೂ ಹತ್ತಿಲ್ಲ. ಅಂತೂ ಇಂತೂ, ಟಪಾಲ್ ಜಾಸ್ತಾ ತಿಂಗಳಿಗೆ ಎಂಟು ಹತ್ತು ಸಂಪಾದನೆ ಮಾಡುತ್ತಾನೆ. ಪ್ರಖ್ಯಾತ ಸಾಹಿತಿ, ಕನ್ನಡಮ್ಮನ ಸೇವಕ, ಕದನ್ನ ಭಾಷ್ಕಕ. ಕೆದರಿದ ಕೂದಲು, ಒಗೆಯದ ಜುಬ್ಬ, ಕೊಳಕು ಪೈಜಾಮು. ಆಕಾಶದ ಕಡೆ ನೋಟ, ಪಾತಾಳದ ಕಡೆ, ನಡಿಗೆ.

ಸ್ಟೇಷನಿಂದ ನಮ್ಮ ಮನೆಗೆ ನಡೆದುಕೊಂಡೇ ಬಂದ. ಆದರೆ, ಹಾಸಿಗೆ ಮಾತ್ರ ತಾನು ಹೊರದೆ, ಒಬ್ಬ ಪಿಲ್‌ಟು ತಲೆಮೇಲಿರಿಸಿ ತಂದು, ಅವನಿಗೆ ಒಂದಾಣೆ ಕೂಲಿ ತೆತ್ತ. ಅದ್ದರಿಂದ, ಅವನ ಶ್ರೀಮಂತನಾಗುತ್ತಿದ್ದಾನೆ ಎಂದು ನಾನು ಊಹಿಸಿದೆವು

ಬರುತ್ತಲೂ ವಿಚಾರಿಸಿದೆವು. "ಹೌದು, ಈಗ ಸಂಪಾದನೆ ಚೆನ್ನಾಗಿದೆ." ಎಂದ. "ನನ್ನ ನಂಟರನ್ನೆಲ್ಲ ಈಗ ಪೇಪರಿನವರಿಗೆ ಮಾರುತ್ತಿದ್ದೇನೆ; ಪೋಸ್ಟಾ ಫೀಸಿನಲ್ಲಿ ೨೩ ರೂ ಸೇರಿಸಿದ್ದೇನೆ." "ಪೇಪರಿನವರಿಗೆ ನಂಟರಿಲ್ಲವೆ? ಅಥವ, ಇದ್ದರೂ, ಸಾಲದೇನು?" ಎಂದು ಸರಸು ಕುಚೋದ್ಯ ತೆಗೆದಳು.

"ಸುಮ್ಮನಿರಿ! ನನ್ನ ಚಿಕ್ಕಪ್ಪ ಇದಾನಲ್ಲಾ, ಶಾನುಭೋಗ, ಮೊನ್ನೆ ಅರೆ ಸ್ಟಾಯಿತಲ್ಲ, ಅವನ ವಿಷಯ ಬರೆದೆ, "ಕಾಮನಬಿಲ್ಲ" ಪೇಪರಿಗೆ .. ಮೂರೂ ವರೆ ರೂಪಾಯಿ ಬಂತು, ಟಪಾಲು ಖರ್ಚು ಕಳೆದು. ನನ್ನ ಸೋದರತ್ತೆ ನನ್ನ ಮದುವೇಲಿ ರಂಪು ಎಬ್ಬಿಸಿದಳಲ್ಲಾ, ಅದನ್ನ ಬರೆದು ಕಳುಹಿಸಿದೆ. "ಗೃಹ ಕೃತ್ಯ"ಕ್ಕೆ.... ನಾಲ್ಕು ರೂಪಾಯಿ ಹನ್ನೊಂದಾಣೆ ಗಿಟ್ಟಿತು.... ನಮ್ಮ ತಮ್ಮ ಕಾಪಿ ಹೊಡೆದನಲ್ಲಾ ಪರಿಕ್ಷೇಲಿ.... ಅವನಿಗೆ ಎರಡು ವರ್ಷ ಹೋಯ್ತು.... ನನಗೆ ಎರಡೂ ಕಾಲು ಬಂತು. ನಮ್ಮ ಅಜ್ಜ ಕೈ ಜಜ್ಜಿಸಿಕೊಂಡನಲ್ಲಾ... ಅವನಿಗೆ ಹತ್ತಾರು ರೂಪಾಯಿ ಖರ್ಚು, ಆದರೆ, ಅದನ್ನೇ ಕತೆ ಅಂತ ಬರೆದುಕಳಿಸಿ ನಾನು ಹದಿನಾಲ್ಕಾಣೆ ಹೊಡೆದೆ ..."

"ಹೆಸರು ಗಿಸರು ಪತ್ತೆ ಆಗಿಬಿಟ್ಟರೆ .. ...."

"ಇಲ್ಲ, ಹೆಸರೊಂದು ಮಾತ್ರ ಬದಲಾಯಿಸುತ್ತೇನೆ. ಉಳಿದದ್ದೆಲ್ಲ ಬದಲಾಯಿಸುವುದೆಂದರೆ, ತುಂಬಾ ಶ್ರಮ. ಮೊನ್ನೆ, ಅದನ್ನೂ ಮರೆತೆ. ಅದ್ದರಿಂದ, ಈಗ ನಾನು ನಮ್ಮ ದೊಡ್ಡಪ್ಪನ ಮನೆ ಕಡೆ ಹೋಗುವ ಹಾಗೆಯೇ ಇಲ್ಲ... ಮೊನ್ನೆ "ರಕ್ತ"ದಲ್ಲಿ ಬಂದಿತ್ತಲ್ಲಾ ಭುಜಬಲ ಅಂತ ಕತೆ, ಅದು ನನ್ನ ಮಾವ ಅವನ ಸೋದರಳಿಯನ ಮಗು ಕಿವೀನ ಹಿಂಡಿದ್ದು ನಾನು ಕಣ್ಣಾರ ಕಂಡಿದ್ದು... ಹೋದ ತಿಂಗಳು, "ರಸಾಯನ" ಪತ್ರಿಕೆಯಲ್ಲಿ 'ಕರ್ಣ ರಸಾಯನ' ಎಂಬ ಕತೆ ಬಂದಿರಲಿಲ್ಲವೆ, ಎರಡೂವರೆ ರೂಪಾಯಿನದು....ಅದು ನನ್ನ ಭಾವ ಮೈದುನನ ಕೂಸಿಗೆ ಕಿವಿ ಚುಚ್ಚಿದ ದಿನ ಮಾಡಿದ ರಸಾಯನ ಕೆಟ್ಟು ಹಳಸಿ ಹೋದ ವೃತ್ತಾಂತವೆ...."

ಹೀಗೆ, ಸುಬ್ಬರಾಮು ಒಂದೊಂದಾಗಿ ಹೇಳುತ್ತ ಹೋದ. ನಮಗೆ ಈ ಶನಿ ಯಾಕಪ್ಪ ನಮ್ಮ ಮನೆ ವಕ್ರಿಸಿತು ಎನ್ನಿಸಿತು.

ಸಧ್ಯಕ್ಕೆ, ಸೋಮವಾರವೇ ತೊಲಗಿದ. ಇನ್ನೊಂದು ನಾಲ್ಕು ತಿಂಗಳ ಕಾಲ ಕನ್ನಡ ವಾರ ಪತ್ರಿಕೆಗಳನ್ನೆಲ್ಲ ತಿರುವಿಹಾಕಬೇಕು, ನಾನು. ನನ್ನನ್ನೂ ಸರಸೂನೂ ಎಲ್ಲಿ, ಹೇಗೆ, ಬಯಲಿಗೆಳೆದಿದಾನೆ ಈ ಕೆಡುಕ ಅಂತ ಹುಡುಕ ಬೇಕು!

ಅಥವ, ಹತ್ತು ರೂಪಾಯಿನ್ನ ಹಾಳಾದವನಿಗೆ ಮನಿಆರ್ಡರ್ ಮಾಡಿ, ಅವನ ಬಾಯಿ ಮುಚ್ಚೋಣವೋ? ಅವನ ಲೇಖನಿಯ ಬೆಲೆಯನ್ನು ನಿಶ್ಚಯಿಸುವುದು ಹೇಗೆ?

—ಕಾಮತ್



ಬನ್ನಿ! ಬನ್ನಿ! ಪಂಡಿತ್‌ಜೀಯವರು ದಹಲಿಗೆ ಹೊಟುಹೋದರಂತೆ
ಮಕ್ಕಳನ್ನೆಲ್ಲಾ ಎಣಿಸಿಕೊಳ್ಳಿ!

# ಶ್ರೀ ಮುನ್ಶಿಯವರಿಗೆ ನಮ್ಮ ಬಹಿರಂಗಪತ್ರ

---

ಕೃಷ್ಣದೇವಾಲಯದ ಗುರುಕುಲ
೩೦-೭-೧೯೫೧

**ಶ್ರೀಯುತರೇ !**

ನಮ್ಮ ಲೆಕ್ಕದ ವಾದ್ಯಾರಿಗೆ ನಿಮ್ಮನ್ನು ಕಂಡರೆ ಬಲು ಪ್ರೀತಿ. ಬಲು ಆದರ. ಹಿಂದೂ ಸಂಸ್ಕೃತಿಯೇ ನಿಮ್ಮಲ್ಲಿ ಮೂರ್ತಿವೆತ್ತಿದೆ ಎಂದು ಅವರ ಭಾವನೆ. ನಮ್ಮ ವಾದ್ಯಾರ್ ಕೂಡ, ತಮ್ಮ ಜಾತೀಯ ಸಂಸ್ಕೃತಿಯೇ ಮೂರ್ತಿವೆತ್ತಂತೆ ಇದ್ದಾರೆ. ಷೋಡಶ ನಾಮವೇ ಅದರ ಕುರುಹು. ಲೌಕಿಕ ರಾದರೂ ವೈದಿಕಕ್ಕೆ ಸಿದ್ಧರಾದವರು. ಅದಕ್ಕೇ ಅವರಿಗೆ ವಾದ್ಯಾರ್ ಎಂದೇ ಅಭಿದಾನ. ನವವಿದ್ಯಾರ್ಜನೆಯನ್ನು ಪೌಢಿಮೆಯಿಂದ ಸಾಗಿಸಿದ್ದರೂ, ಗುರು ಕುಲಗಳ ಕಡೇಗೆ ಅವರು ವಾಲಿರುವುದು. ಆ ಕಾರಣ ನಾವು ಒಂದು ಇಪ್ಪತ್ತು ಇಪ್ಪತ್ತೈದು ಹುಡುಗರನ್ನು ಶಾಲೆಯ ವೇಳೆ ಆದ ಮೇಲೆ, ಕೃಷ್ಣದೇವಾಲಯದ ಅಂಗಳದಲ್ಲಿ ಕೂರಿಸಿಕೊಂಡು ಗುರುಕುಲದ ನೆನಪು ಬರುವಂತೆ ಶ್ರಮಿಸುತ್ತಿದ್ದರು.

ನನ್ನ ವಿದ್ಯಾಭ್ಯಾಸ ೧೪ನೇ ವಯಸ್ಸಿಗೆ ಶುರುವಾಗಿದ್ದಾದ್ದರಿಂದ, ಈ ಪ್ರೌಢಶಾಲೆಗೆ ಬರುವ ವೇಳೆಗೆ ಕೆಲವು ಉಪಾಧ್ಯಾಯರು ನನಗಿಂತ ಚಿಕ್ಕವರೇ ಇದ್ದರು. ಹಾಗಾಗಿ ಈ ಗುರುಕುಲಕ್ಕೆ ನಾನೇ "ಮಾನಿಟರ್" ಮಾದರಿಯ ವ್ಯವಸ್ಥಾಪಕನಾದೆ. ವಾದ್ಯಾರೇ ಅಧ್ಯಕ್ಷರು.

ನಿಮ್ಮ ವನಮಹೋತ್ಸವದ ಭಾಷಣದ ಸಾರಾಂಶವನ್ನು ಆ ಸಂಜೆ ನಮಗೆ ಹೇಳಿದರು. ಗೀತೆ, ಮಹಾಭಾರತದಿಂದ ಶ್ಲೋಕಗಳನ್ನು ಹೇಳಿ, ನೀವು ಹೇಳಿ ದ್ದನ್ನು ವ್ಯಾಸಮಹಾಮುನಿಯೂ ಕೂಡ ಹೇಳಿದ್ದನೆಂಬುದನ್ನು ಸಮರ್ಥಿಸಿದರು. ಹಸಿಗೂಡಿದರೆ ಹಳ್ಳ. ಗಿಡ ಗೂಡಿದರೆ ಕಾಡು. ನಮ್ಮ ಅಳಿಲು ಸೇವೆ ಮಾಡೋಣ. ಮಾಡಲೇಬೇಕು. ಈ ಕೃಷ್ಣದೇವಾಲಯದ ಪ್ರಾಕಾರದಲ್ಲಿ "ವನ ಮಹೋತ್ಸವ" ಹಾಗೂ "ಹೆಚ್ಚು ಆಹಾರ ಬೆಳೆಯಿರಿ" ಎರಡನ್ನೂ ಪ್ಲಾನ್ ಹಾಕಿ ನಡೆಸೋಣ ಎಂದರು. ಪ್ಲಾನ್ ಹಾಕುವಾಗಲೇ ಲೆಕ್ಕದ ಪಾಠವನ್ನೂ ಮುಗಿಸುತ್ತೇನೆ ಎಂದರು.

ಎರಡೊಂದು ಕೆಲಸವೂ ಆರಂಭವಾಯ್ತು—ಪಂಚವಾರ್ಷಿಕ ಪ್ಲಾನಿನಂತೆ ಪ್ರಾಕಾರದ ಮಧ್ಯೆ ೧೫ ಅಡಿ ಉದ್ದ, ಮೂರಡಿ ಅಗಲ ಇಷ್ಟರಲ್ಲಿ ಚದುರ ಗಜ ಒಂದಕ್ಕೆ ಒಂದರಂತೆ ಎಷ್ಟು ತುಳಸೀ ಗಿಡಗಳನ್ನು ನೆಡಬಹುದು. ಅದಕ್ಕೆ ಎಷ್ಟು ಕೊಡ ನೀರು ದಿನಾಲೂ ಹಾಕಬೇಕು? ಈ ಲೆಖ್ಖ ನನ್ನ ಪಾಲಿಗೆ ಬಂತು. ಉತ್ತರ ಸರಿಯಾಗಿ ಬರೆದುಕೊಟ್ಟ ನನಗೆ ಆ ತುಳಸೀವನದ ಮೇಲ್ವಿಚಾರಣೆ ಬಂತು.

ಈ ತುಳಸೀ ವನದ ಸುತ್ತ ಮೂರಡಿ ಬಿಟ್ಟು ಒಂದು ಚದುರಗಜ ಪಾತಿ ಗಳನ್ನು ಅಗೆದು ಸುತ್ತಲೂ ಪರಂಗಿಮರ ನೆಡಬೇಕು. ಎಷ್ಟು ಪಾತಿಗಳು ಸಾಧ್ಯ? ಎಷ್ಟು ಕೊಡ ನೀರು ಹಾಕಬೇಕು?

ಈ ಲೆಖ್ಖ ನಮ್ಮ ಕುಳ್ಳಶ್ಯಾಮಿ ಪಾಲಿಗೆ ಬಂತು. ಉತ್ತರ ಸರಿಯಾಗಿ ಬರೆದ. ಆದರೆ ಮೂವತ್ತು ಕೊಡ ನೀರು ಅವನು ಹೇಗೆ ಹಾಕಬಲ್ಲ. ಕುಳ್ಳ ಶ್ಯಾಮಿ, ಮತ್ತು ನಾನು ಈ ವ್ಯವಸ್ಥೆಗೆ ಪಾಲುದಾರರಾದೆವು.

ಇದಕ್ಕೆ ಸಮಭುಜವಾಗಿ ಎಂಟೆಂಟಡಿ ಚದುರದ ಎಷ್ಟು ಭಾಗಗಳನ್ನು ಮಾಡಬಹುದು. ಒಂದೊಂದರಲ್ಲಿ ಏನೇನು ಬೆಳೆಯಬಹುದು?

ಇದಕ್ಕೆ ನಾಲ್ಕು ಜನ ಹುಡುಗರು ಒಂದೇ ಉತ್ತರ ಬರೆದರು. 6 ಭಾಗ ಗಳು. ಒಂದರಲ್ಲಿ ಮುಸುಕಿನ ಜೋಳ. ಒಂದರಲ್ಲಿ ರಾಗಿ. ಒಂದರಲ್ಲಿ ಭತ್ತ. ಒಂದರಲ್ಲಿ ಮೆಣಸಿನಕಾಯಿ. ಒಂದರಲ್ಲಿ ಹುರುಳಿಕಾಯಿ. ಒಂದರಲ್ಲಿ ಬದನೆ ಕಾಯಿ.

ವಾದ್ಯಾರು ಸೇರಿಕೊಂಡರು ಈ ಉದ್ಯಮಕ್ಕೆ ಆ ನಾಲ್ವರ ಸಹಾಯಕ್ಕೆ.

ಇದರ ಸುತ್ತಲೂ ಆರಡಿಗೊಂದರಂತೆ ದೊಡ್ಡಪಾತಿ ತೆಗೆದು ತೆಂಗಿನ ಸಸಿ ನೆಟ್ಟರೆ ಎಷ್ಟು ತೆಂಗಿನ ಮರ ಬೆಳೆಸಬಹುದು.

೮ ಜನ ಹುಡುಗರು ಒಂದೇ ಉತ್ತರ ಬರೆದರು. ೨೪. ಅದರ ಜವಾಬ್ದಾರೀ ಅವರಿಗೆ ಬಿತ್ತು. ದೇವಸ್ಥಾನದ ಜವಾನನ ಸಹಾಯದೊಂದಿಗೆ.

ಸರಿ! ಲೆಕ್ಕಕ್ಕೆ ಲೆಕ್ಕಾ ಆಯಿತು. ವನಕ್ಕೆ ವನವಾಯ್ತು. ಹೆಚ್ಚು ಆಹಾರ ಬೆಳೆದಿದ್ದಾಯ್ತು! ಇನ್ನೇನು!

ಆರಂಭದಲ್ಲಿ ಹುರುಪಿನಿಂದ ಎಲ್ಲಾ ಪ್ಲಾನಿನಂತೆ ನಡೆಸಿದೆವು. ಒಂದು ತಿಂಗಳಲ್ಲಿ ಸಣ್ಣ ಸಣ್ಣ ಮೊಳಕೆಗಳು ಕಾಣಬಂದುವು. ನಮಗೆಲ್ಲಾ ತೋಳು

ಭುಜಗಳೆಲ್ಲಾ ಬೆಳೆಯುವ ಸೂಚನೆ ಕಂಡುಬಂದುವು. ಎಷ್ಟು ಸಾರಿ ಊಟ ಮಾಡಿದರೂ ಇನ್ನೂ ಬೇಕು ಎನ್ನುವಂತಾಯಿತು. ಮಲಗಿದರೆ ಕನಸಿಲ್ಲದೇ ಪೂರ್ಣ ನಿದ್ರೆ ಬರುತ್ತಿತ್ತು. ಹೀಗೆ ಒಂದು ವರ್ಷ ನಡೆದರೆ ನಾವೆಲ್ಲಾ ಬಲ ಶಾಲಿಗಳಾಗಿ, ಭಾರತದ ಆಧಾರಸ್ತಂಭಗಳಾಗಲು ಅರ್ಹರಾಗುತ್ತೇವೆ ಎಂದು ಖಂಡಿತವಾಯ್ತು.

ಆಗ ಬಂತು ಕೆಟ್ಟ ಸುದ್ದಿ. ವಾದ್ಯಾರಿಗೆ ಬೇರೆ ಊರಿಗೆ ವರ್ಗ ಅಂತ. ಕಾರಣ; ನಮ್ಮೂರಿನ ಜನ ನಾಯಕನ ಅಳಿಯ ಲೆಕ್ಕದ ಪದವೀಧರನಾದನಂತೆ. ಆತನನ್ನು ನಮ್ಮೂರಿನಲ್ಲೇ ಇಟ್ಟುಕೊಂಡರೆ ಮಗಳಿಗೆ ಸೌಖ್ಯ ಎಂದು ಆತನನ್ನು ಇಲ್ಲಿ ಕೆಲಸಕ್ಕೆ ನೇಮಿಸುವ ಏರ್ಪಾಡಂತೆ. ವಾದ್ಯಾರು ಈ ಗಲಾಟೆಯಲ್ಲಿ ದೇವಾಯಲವೇ ಇಲ್ಲದ ಹೊಸಪಟ್ಟಣಕ್ಕೆ ವರ್ಗವಂತೆ.

ವಾದ್ಯಾರಿಲ್ಲದೆ ನಾವು ಕುರುಬನನ್ನು ಕಳೆದುಕೊಂಡ ಕುರಿಗಳಂತಾಗಿ ದ್ದೇವೆ. ಅದಕ್ಕಾಗಿ ಕೃಷ್ಣದೇವಾಲಯದ ಗುರುಕುಲದ ಪರವಾಗಿ ನಾನು ಈ ಅಹವಾಲನ್ನು ಬರೆದಿದ್ದೇನೆ. ದಯಮಾಡಿ ಈ ವರ್ಗವನ್ನು ರದ್ದುಮಾಡಿ. ಅಳಿಯೆಂದಿರೂ ಇರಲಿ, ನಮ್ಮ ವಾದ್ಯಾರೂ ಇರಲಿ, ಇಬ್ಬರಿಗೂ ಲೆಕ್ಕದ ಪಾಠವೇ ಆದರೂ ಪರವಾಗಿಲ್ಲ. ಇಬ್ಬರನ್ನೂ ತಡೆದುಕೊಳ್ಳುತ್ತೇವೆ.

ಇತಿ ನಿಮ್ಮ ಅನುಯಾಯಿ ಬಾಲಕ,

**ಸೈಂಧವ.**



"ಹೆದರಬೇಡ—ಕಳ್ಳು ಎಲ್ಲಿ ಸತಾಗವಾಗಿ ಸಿಗುತ್ತೆ ಹೇಳು ಸಾಹೇಬ್ರೇಗ"

# "ರೈಲ್ವೆಯವರೊಡನೆ ಭೇಟಿ"

(ನಮ್ಮ ಸ್ವಂತ ವರದಿಗಾರರಿಂದ)

---

ಆಗಸ್ಟ್ ೨೭ಕ್ಕೆ ಅಖಿಲ ಭಾರತ ರೈಲ್ವೆಯವರೆಲ್ಲಾ ಸಂಪು ಹೂಡುತ್ತಾರೆ. ಅಲ್ಲಿಂದಾಚೆಗೆ ಅತ್ತೆ ಮನೆಗೆ ಅಳಿಯ ಬರೋಹಾಗಿಲ್ಲ. ಗಂಡನ ಮನೆಗೆ ಹೆಂಡತಿ ಬರುಕ್ಕಾಗುಲ್ಲ ಊರಿಂದೂರಿಗೆ ಅಕ್ಕಿ ಬೇಳೆ ಸಾಗಾಣಿಕೆ ಇಲ್ಲ. ಅಂಚೆ ವ್ಯವಸ್ಥೆ ಕೂಡ ಅವ್ಯವಸ್ಥೆ. ಹೀಗೆ ಜನ ಜೀವನವೇ, ವನ ಜೀವನವಾಗ ಬಹುದು. ಆದ್ದರಿಂದ ರಾಜೀವಪುರದ ರೈಲ್ವೆಯವರನ್ನು, ದೊಡ್ಡವರಿಂದ ಕೀಳು ಕೆಲಸದವರೆಗೂ ಮಾದರೀಗೆ ಅಂತ ಒಬ್ಬೊಬ್ಬರನ್ನೂ ಭೇಟಿ ಮಾಡಿ ದಿಟವಾದ ಸನ್ನಿವೇಶ ಕಂಡು ಹಿಡಿಯಬೇಕು ಎಂದು ನಮ್ಮ ಸಂಪಾದಕರು ನನಗೆ ಆಜ್ಞೆ ಮಾಡಿದರು. ಆ ವರದಿ ತಯಾರು ಮಾಡಲು ನಾನು ಐದು ಜನ ರೈಲ್ವೆ ಅಧಿಕಾರಿಗಳನ್ನು ಭೇಟಿ ಮಾಡಿದೆ. ಜಟಾಕು, ಪಾವು, ಸೇ[illegible], ಆಫ್ಸೀರು ಈ ರೀತಿಯಾಗಿ ಕೆಳಗಿನಿಂದ ಮೇಲಿನ ತನಕ ಐದು ಜನರನ್ನು ಹಿಡಿದೆ. ಒಬ್ಬೊಬ್ಬರೊಡನೆ ನಡೆದ ಭೇಟಿಯನ್ನು ಇಲ್ಲಿ ಕೊಟ್ಟಿದ್ದೇನೆ.—ಕನ್ನಡಕ್ಕೆ ತರ್ಜುಮೆ ಮಾಡಿ—

ರೈಲ್ವೆ ಕಾಮಾಟಿ: ಹೊಸ ಸಮವಸ್ತ್ರ, ಎಲಡಿಕೆ ಮೆಲ್ಲುತ್ತಾ ಬೀಡಿ ಕಚ್ಚಿದ್ದ

"ಏನಯ್ಯಾ! ಈ ಸಂಪು ಹೂಡಿದರೆ ನಿಮಗೆ ಸಂಬಳವೇ ಇಲ್ಲವಲ್ಲಾ, ಜೀವನ ಹೇಗೆ ನಡೆಸುತ್ತೀರಿ" ಎಂದು ಕೇಳಿದೆ, ಅವನಿಗೆ ಕಾಕನ ಅಂಗಡೀಲಿ ಒಂದು ಗ್ಲಾಸು ಚಾ ಕುಡಿಸುತ್ತಾ.

ಅವನೆಂದ "ನಮಗೇನು ಸಾರ್! ಎಲ್ಲರೂ ಕೈ ಎತ್ತಿ ಸಂಪು ಹೂಡಬೇಕು. ಹಾಗೆ ಮಾಡಿದರೆ ಈಗಿರುವ ಎಪ್ಪತ್ತೈದು ರೂಪಾಯಿ ಸಂಬಳ ನೂರಕ್ಕೆ ಆಗುತ್ತೆ. ಎರಡು ವರ್ಷ ದುಡಿದರೆ ಗೂಡ್ಸ್ ಕಂಟ್ರಾಕ್ಟ್‌ಗೆ ಕೈ ಹಾಕಬಹುದು. ಎಂದು ನನ್ನ ಜತೆಯವ ಹೇಳಿದ. ಸಂಪು ಹೆಚ್ಚು ದಿನ ನಡೆಯಲಾರದು ನಡೆ ದರೆ ಸರ್ಕಾರ ಬಿದ್ದುಹೋಗುತ್ತೆ. ಅಂತಲೂ ಹೇಳಿದ. ಎಲ್ಲಾ ಒಪ್ಪಿವೆವು." ಅಂತ.

'ಅಲ್ಲಯ್ಯಾ! ನಿನಗೆ ಎಪ್ಪತ್ತೈದು ಸಂಬಳ ಅಂತಿ. ಶಾಲೆ ಮೆಟ್ಟಲನ್ನೇ ಹತ್ತಿಲ್ಲ ನೀನು, ಕಸುಬಿನಲ್ಲೂ ದಕ್ಷತೆ ಪಡೆದಿಲ್ಲ. ನಾನು ನೋಡು. ೧೮ ವರ್ಷ ಓದಿದೆ. ಈಗ ಸಂಪಾದಕರು ಕೊಡೋ ಮೂವತ್ತೈದಕ್ಕೆ ನಿನ್ನ ಕಾಲು ಹಿಡಿದು ವರದಿ ಕೇಳ್ತಾ ಇದೇನೆ. ಇನ್ನೂ ನಲವತ್ತು ಬೇಕು ಅಂತೀ ಇದು ನ್ಯಾಯವೇ!' ಎಂದೆ.

'ಹಾಗೇ ಸಾರ್! ಹಾಗಾದರೆ ಈ ಚಹಾದ ಖರ್ಚು ನಾನೇ ಕೊಡುತ್ತೇನೆ. ನೀವು ಇಲ್ಲೇ ಯಾಕೆ ಸಾರ್ ಕೆಲಸಕ್ಕೆ ಸೇರಬಾರದು! ನಾನು ನಮ್ಮ ಮೇಸ್ತ್ರಿಗೆ ಹೇಳಿ ಶಿಫಾರಸು ಮಾಡುತ್ತೇನೆ' ಎಂದ.

ಊರ ಕಸಾನೆಲ್ಲಾ ಸುದ್ದಿ ಅಂತ ಪ್ರಚಾರ ಮಾಡೋ ಬದಲು, ಕಸಾ ಗುಡಿಸಿ ಶುಭ್ರಮಾಡೋ ಕೆಲಸ ಸಿಕ್ಕರೆ, ಅದೂ ಎರಡರಷ್ಟು ಸಂಬಳದ ಕೆಲಸ ಸಿಕ್ಕರೆ ಒಂದು ಕೈ ನೋಡೋಣವೇ ಎನ್ನಿಸಿತು. ತಿರುಗಿ ಬಂದು ನಿನ್ನ ನೋಡುತ್ತೇನೆ ನನ್ನ ಹೆಂಡತಿ ಒಪ್ಪಿದರೆ ಈ ಕೆಲಸಕ್ಕೆ ಸೈ ಎಂದು ನಾನು ಹೊರಬಿದ್ದೆ.

*                    *                    *

ಗೂಡ್ಸ್ ಕ್ಲಾರ್ಕ್ ಚೆನ್ನಯ್ಯ—ಬಿನ್ನಿ ಷರ್ಟು, ಹೊಸಾ ಷರಾಯಿ ಸಿಗರೇಟು ಸೇದುತ್ತಾ ಇದ್ದ.

ಏನು ಚನ್ನಯ್ಯಾ! ವಿರಾಮವಾಗಿದ್ದಿ!

ಏನೂ ಇಲ್ಲಪ್ಪಾ! ಇನ್ನೇನು ಒಂದು ತಿಂಗಳಲ್ಲಿ ಸಂಪು ಹೂಡುತ್ತೇವೆ. ಒಂದು ವಾರಾನೇ ನಡೆಯುತ್ತೋ, ಒಂದು ತಿಂಗಳೇ ನಡೆಯುತ್ತೋ! ದೇವರೇ ಬಲ್ಲ! ಅದಕ್ಕಾಗಿ ಈಗಿನಿಂದಲೇ ಮುಂಜಾಗ್ರತೆ ಏರ್ಪಡಿಸುತ್ತಿದ್ದೇವೆ. ಎರಡು ತಿಂಗಳು ಸಂಪು ನಡೆದರೆ, ಎರಡು ತಿಂಗಳು ಗೂಡ್ಸ್ ಷೆಡ್ಡಿಗೆ ನಮ್ಮನ್ನು ಸೇರಿಸದೆ ಇದ್ದರೆ, ಎರಡು ತಿಂಗಳು ಮನೆ ಸಂಸಾರ ನಡೆಯಲು ಏನೇನು ಬೇಕೋ ಅದನ್ನೆಲ್ಲಾ ಈಗಲೇ ಸಿದ್ಧ ಮಾಡ್ತಾ ಇದ್ದೇನೆ. ಬೆಳಗಿನ ಝಾವ ನಾಲ್ಕು ಸಿಬ್ಬಂದಿಗಳೊಡನೆ, ನಾಲ್ಕು ಸಕ್ಕರೆ ಗುತ್ತಿ ಹಿಡಿದು ಇಲ್ಲಿಗೆ ಬಂದೆ. ಇನ್ನೂ ಊಟಕ್ಕೆ ಮನೆಗೆ ಹೋಗಿಲ್ಲ ಈಗಾಗಲೇ ಸಾಯಂಕಾಲ ನಾಲ್ಕು ಗಂಟೆಗೆ ಬಂತು. ಅದೂ ಇದೂ ಅಲ್ಲಿ ಇಲ್ಲಿ ಅವರೂ ಇವರೂ ಕೊಡಿಸಿದ ಹಾಳೂ ಮೂಳು ತಿಂದು ದುಡಿಯುತ್ತಾ ಇದ್ದೇನೆ. ಇನ್ನು ಒಂದು ವಾರದಲ್ಲಿ ಎಲ್ಲಾ ಸಿದ್ಧತೆ ಆಗಬಹುದು. ಇಜ್ಜಲು, ಅಕ್ಕಿ, ಬೇಳೆ, ಉಪ್ಪು, ಆಲೂಗಡ್ಡೆ, ಮೆಣಸಿನ ಕಾಯಿ, ತೆಂಗಿನಕಾಯಿ ಎಲ್ಲಾ ಆಯಿತು ಆದರೆ ಇನ್ನೂ ಸಕ್ಕರೆ ವ್ಯಾಗನ್ನೇ

ಬಂದಿಲ್ಲ ಇಲ್ಲಿಗೆ, ಕಡ್ಡೀ ಪೆಟ್ಟಿಗೆ ವ್ಯಾಗನ್ನೂ ಬಂದಿಲ್ಲ. ಈರುಳ್ಳಿ ವ್ಯಾಗನ್ನೂ ಬಂದಿಲ್ಲ. ಅದು ಬಂದ ಕೂಡಲೇ ಸರಬರಾಜೆಲ್ಲಾ ಸಂಪೂರ್ಣ." ಅಂದ.

'ಅಲ್ಲಾ! ಚೆನ್ನಯ್ಯಾ! ನಿಮಗೆಲ್ಲಾ ಫೇರ್ ಪ್ರೈಸ್ ಡಿಪೋ ಅಂತ ರೈಲ್ವೆಯೋರು ರೂಪಾಯಿಗೆ ಎರಡು ಸೇರು ಕೊಂಡು ಮೂರು ಸೇರಿನ ಹಾಗೆ ಮಾರುತ್ತಾರಲ್ಲಾ. ಅಂತಹ ಅನುಕೂಲ ಇರೋವಾಗ ಈ ಹಿಂಗೈ ವ್ಯವಹಾರಕ್ಕೆ ಸಕ್ಕರೆ ಗುತ್ತಿ ಕಾರ್ಯಕ್ಕೆ, ಮೂಷಕ ವೃತ್ತೀಗೆ ಏಕೆ 'ಕೈ ಹಾಕುತ್ತಿ' ಎಂದೆ.

"ಅಯ್ಯಾ! ಇದು ಗೊತ್ತಿಲ್ಲವೇ! ನಮಗೆ ಫೇರ್ ಪ್ರೈಸ್ ಡಿಪೋ ಬದಲು ಮೂವತ್ತೈದು ರೂಪಾಯಿ ಭತ್ಯ ಎಂದೆವು. ಅವರಿಗೆ ಅದಕ್ಕಿಂತಲೂ ಹೆಚ್ಚು ಖರ್ಚಾಗುತ್ತಿತ್ತು.— ಅವರೂ ಹ್ಞೂ ಅಂದರು. ಈಗ ಹೆಚ್ಚು ಕಡಿಮೆ ಫೇರ್ ಪ್ರೈಸ್ ಡಿಪೋಗಳೆಲ್ಲಾ ಮುಚ್ಚಿವೆ. "ನೋ ಪ್ರೈಸ್ ಡಿಪೋ ನಮ್ಮ ಕೈಲೇ ಇರೋವಾಗ ಅದೇತಕ್ಕೆ ಅಂತ ಕೈ ಬಿಟ್ಟೆವು. ಈ ಸಂಪು ಖಂಡಿತ ಜಯಶಾಲಿಯಾಗುತ್ತದೆ. ಎಲ್ಲರಿಗೂ ಎರೆಡೆರಡು ತಿಂಗಳು ಸುಖವಾಗಿ ನಡೆಸಲು ಏರ್ಪಾಡಾಗಿದೆ. ಆದರೆ ಸರ್ಕಾರ ಎರಡು ತಿಂಗಳು ಹಾಗಿರಲಿ ಎರಡು ದಿವಸಾ ಕೂಡ ನಡೆಯಲಾರದು ಅದಕ್ಕೇ ನನಗೆ ನಮ್ಮ ಜಯದಲ್ಲಿ ನಂಬಿಕೆ."

ಉರಿಯುತ್ತಿದ್ದ ಹೊಟ್ಟೆ ಅದುಮಿಕೊಂಡು ಹೊರಕ್ಕೆ ಹೊರಟೆ.

*    *    *

ಅಂಥೋನಿ ಸಾಮಿ ಅಂಡರ್ ಗಾರ್ಡ್—ಅಚ್ಚುಕಟ್ಟಾದ ಬೆಚ್ಚಗಿನ ನೀಲಿ ಸಮವಸ್ತ್ರ ಧರಿಸಿದವ, ಸಿಗರೇಟ್ ಸೇದುತ್ತಿದ್ದ.

'ಏನಯ್ಯಾ! ದೊರೆ! ಹೇಗಿದ್ದೀಯಾ' ಎಂದೆ.

'ತಕ್ಕಮಟ್ಟಿಗೆ ಇದ್ದೇನೆ. ಅದು ಹಾಗಿರಲಿ ನಾವು ಶಾಲೆ ಬಿಟ್ಟಮೇಲೆ ಮಹಾ ಓದಿದವನು! ಅಂತ ಈ ಕಡೆ ನನ್ನ ನೋಡಲೂ ಇಲ್ಲ. ಈಗೇನು ಇಷ್ಟು ದೋಸ್ತಿ ಮಾಡಿಕೊಂಡು ಬಂದಿದ್ದು. ಯಾರನ್ನಾದರೂ ಟಿಕೆಟ್ಟಿಲ್ಲದೆ ಕರೆದು ಕೊಂಡು ಹೋಗು ಅಂತ ಕೇಳಲಿಕ್ಕೆ ಬಂದೆಯಾ!

"ಇಲ್ಲಯ್ಯಾ! ಯಾರಿದ್ದಾರೆ ನನಗೆ ರೈಲಿನಲ್ಲಿ ಹೋಗೋ ಅಂತಹವರು! ಅದಕ್ಕಲ್ಲಾ! ನಿಮ್ಮವರು ಸಂಪು ಹೂಡುತ್ತಾರಂತೆ. ಗೂಡ್ಸಿನವರು, ಸ್ಟೇಷನ್ನಿನವರು ಎಲ್ಲಾ ಮುಂಜಾಗ್ರತೆ ಮಾಡಿ ಕೊಂಡಿದ್ದಾರೆ. ದಿಟ. ಆದರೆ ನಿಮ್ಮ ಸಂಪಾದನೆಯೆಲ್ಲಾ ಓಡಾಡೋ ರೈಲಿನಲ್ಲೇ! ಸಂಪು ಹೂಡಿದರೆ ನಿನ್ನ ಗತಿ ಹೇಗೆ

ಅಂತ ಯೋಚನೆಯಾಯಿತು ನನ್ನಿಂದ ಏನಾದರೂ ಸಹಾಯ ಆಗಬಹುದೋ ಅಂತ ನಿನ್ನ ಕೇಳುಕ್ಕೆ ಬಂದೆ." ಅಂತ ಅಂದೆ.

"ಹಾಗಾ! ಬಹಳ ಥ್ಯಾಂಕ್ಸ್! ಆದರೆ ಆ ಯೋಚನೆ ಬೇಡ. ನಮ್ಮಲ್ಲಿ ಒಗ್ಗಟ್ಟಿದೆ. ನಾನು ಓಡಾಡೋ ರೈಲಿನಲ್ಲಿ ಸಂಪಾದಿಸಿದ್ದೂ, ಗೂಡ್ಸ್‌ನವರು ಸ್ಟೇಷನ್ನಿನವರು ಎಲ್ಲರೂ ಎಲ್ಲವನ್ನೂ ಒಂದು ಭಂಡಾರಕ್ಕೆ ಹಾಕುತ್ತೇವೆ. ಅದನ್ನು ಯೋಗ್ಯತಾನುಸಾರ ಹಂಚಿಕೊಳ್ಳುತ್ತೇವೆ. ರೈಲ್ವೆ ತನಿಖೆ ಇಲಾಖೆಯ ಅಧಿಕಾರಿಯೇ ಈ ಲೆಕ್ಕಪತ್ರಕ್ಕೂ ಈ ಭಂಡಾರ ಹಂಚಿಕೆಗೂ ಅಧಿಕಾರಿ. ನಮ್ಮ ನಮ್ಮಲ್ಲೇ ಮೋಸ ಮಾಡುತ್ತೇವೆಯೇ! ಏನೂ ಅಧೈರ್ಯ ಪಡಬೇಡ! ಈಗಾಗಲೇ ಎರಡು ತಿಂಗಳಿಗೆ ಬೇಕಾದ ಅರ್ಧಸಾಮಾನು ನಮ್ಮನೆಗೆ ಆಗಲೇ ಸರಬರಾಜಾಗಿದೆ." ಅಂದ ಇದನ್ನು ಕೇಳಿ. ಆದ ಸಂಕಟ ಪರಿಹಾರವಾಗಲೀ ಅಂತ ವೆಂಕಟರಮಣನ ಧ್ಯಾನಮಾಡುತ್ತಾ ಅವನನ್ನ ಬೀಳ್ಕೊಟ್ಟೆ.

* * *

ಮಿ॥ ಗ್ಯಾರಿಸ್, ಎಂಜಿನ್ ಡ್ರೈವರ್, ತೋಳದಂತಹ ದೇಹ, ಎಂಜಿನ್ ಕೆಲಸ ಮಾಡದಿದ್ದರೆ, ಇಡೀ ರೈಲನ್ನೇ ಎಳೆದುಕೊಂಡು ಹೋಗಬಲ್ಲೆನ್ನುವ ಬೈಸೆಪ್‌ಗಳು. ಸಿಗಾರ್ ಶೃಂಗರಿಸಿದ ಮೋರೆ—

"ಸುಪ್ರಭಾತ, ಗ್ಯಾರಿಸ್, ಚೆನ್ನಾಗಿದ್ದೀರಾ ಹವಾ ತಕ್ಕಮಟ್ಟಿಗಿದೆ ಇಲ್ಲವೇ!" ಎಂದೆ.

ಸುಪ್ರಭಾತ, ಹವಾ ಚೆನ್ನಾಗಿಲ್ಲದೇ ಏನು! ನಿನ್ನೆ ತಾನೇ ಮಂಡ್ಯದಿಂದ ಗೂಡ್ಸ್ ಗಾಡಿ ತಂದೆ. ಇನ್ನು ಎರಡು ದಿವಸ ಮಳೆ ಬೀಳಲಿ ಮಂಜು ಹರಿಯಲಿ, ನನ್ನ ಕಾವು ಕಡಿಮೆಯಾಗುಲ್ಲ! ಈ ಲೈನ್ಸ್‌ನಲ್ಲೇ ನನ್ನನ್ನು ಬಿಟ್ಟರೆ ನನಗಿನ್ನೇನೂ ಬೇಡವೆ ಬೇಡ ಅಂದ.

ಪಾನ ನಿರೋಧದ ಮೂರ್ತಿಯಂತಿತ್ತು ಆಗ, ಆ ಒಂದು ಕ್ಷಣ.

'ಹಾಗಲ್ಲಾ! ಸಾರ್! ನಿಮ್ಮವರು ಸಂಪು ಹೂಡ್ತಾರಂತೆ. ಅಂದ ಮೇಲೆ ನೀವು ಮಂಡ್ಯಕ್ಕೆ ಗಾಡಿ ಬಿಡೋದು ಹೇಗೆ! ಒಂದು ತಿಂಗಳು ಸಂಪು ಹೂಡಿದರೆ ಬಾಯಾರಿ ಬಳಲಿ ಸತ್ತೇ ಹೋಗುವಿರಲ್ಲ! ಕೊಂಡು ಬಾಯಾರಿಕೆ ಕಳೆದು ಕೊಳ್ಳಲು ಸಂಬಳ ಸಾಲುಲ್ಲ ನಿಮಗೆ ಏನು ಮಾಡ್ತೀರಿ ನೀವೇಕೆ ಸಂಪು ಹೂಡಲಿಕ್ಕೆ ಹ್ಞೂ ಎಂದಿರಿ' ಎಂದೆ.

ನಾಲಿಗೆಯಿಂದ ತುಟಿಯನ್ನು ಮರಸಿಕೊಳ್ಳುತ್ತಾ ಅವನಂದ :—

'ಅದಕ್ಕೆಲ್ಲಾ ಅನುಕೂಲ ಮಾಡಿದ್ದೇನೆ. ನಮ್ಮನೆ ಹಂಡೇ ತುಂಬಾ ಈ ಒಂದು ವಾರದಿಂದಲೂ ಪೀಪಾಯಿನಿಂದ ಸರಬರಾಜು ಮಾಡಿದ್ದೇನೆ. ಇದು ಸಮಸ್ತ ವಸ್ತುಗಳ ಭಂಡಾರಕ್ಕೆ ಹೊರಗಿರುವುದು. ಆದ್ದರಿಂದ ಅವರಿಗೆ ಲೆಕ್ಕ ಕೊಡಬೇಕಿಲ್ಲ. ನನ್ನ ದೋಸ್ತಿ ಒಬ್ಬ ಕೆಳಗಾರ್ಡ್ ಇದ್ದಾನೆ. ನನ್ನ ಮರಿ ಯದೆ ಎರಡು ತಿಂಗಳು ನಾವು ಬಾಯಾರದಂತೆ ಏರ್ಪಡಿಸಿದ್ದಾನೆ' ಅಂದ.

ಒಣಗಿದ ಬಾಯನ್ನು ಒಣಗಿದ ನಾಲಿಗೆಯಿಂದ ತರಿಯುತ್ತಾ ಅವನನ್ನು ಕೈನಲ್ಲೇ ವಂದಿಸಿ ಹೊರ ಹೊರಟೆ.

* * *

ಅಧಿಕಾರಿ. ಹಾಕಿದ ಬಟ್ಟೆ ನೋಡಿದರೆ ನನ್ನಂತೆಯೇ! ಸಂಬಳ ಎಷ್ಟೆಂದರೆ ೨,೦೦೦, ಕೈಕೆಳಗೆ ೩೦,೦೦೦ ನೌಕರರು—ಮುಖ ಛಾಯೆ ಚಿಂತಾಮಗ್ನ!

'ನಮಸ್ತೇ!' ಅಂದೆ ಕೊಠಡಿಯೊಳಕ್ಕೆ ನನ್ನ ಕಾರ್ಡು ಕೊಟ್ಟು ಹೋದಾಗ.

ಆತ ಎದ್ದು ನಿಂತು ಒರಮಾಡಿಕೊಂಡು ಕುರ್ಚಿ ಕೊಟ್ಟು ಕುಳ್ಳಿರಿಸಿದ.

'ಏನು ಸಮಾಚಾರ! ನಿಮಗೆ ಯಾವ ರೀತಿ ಸೇವೆ ಮಾಡಲು ನನಗೆ ಅವ ಕಾಶವಿದೆ' ಎಂದ.

ಆ ಸೌಜನ್ಯ ನೋಡೇ ನಾಮ ಸುಸ್ತಾದೆ. ಇದ್ದಿದ್ದು ಇದ್ದ ಹಾಗೇ ಹೇಳಿದೆ. ಸಾರ್ವಜನಿಕರಿಗೆ ಈ ರೈಲ್ವೆಯವರ ಸಂಪು ಏನು ಭೀತಿ ಹುಟ್ಟಿಸಿದೆ, ಎಷ್ಟು ಅನ್ಯಾಯ ಎನ್ನಿಸಿದೆ. ಇದಕ್ಕೆ ಪರಿಹಾರ ಉಂಟೇ! ಎಂದು ಎಲ್ಲವನ್ನೂ ಹೇಳಿದೆ. ನಾನು ಪತ್ರಿಕಾ ವರದಿಕಾರ ಎಂದೆನ್ನುವುದನ್ನೂ ಜ್ಞಾಪಿಸಿದೆ.

ಆಗಂದ ಆತ ಮೆಲ್ಲ ಮೆಲ್ಲನೆ—

"ನೋಡಿ! ರೈಲ್ವೆ ಇಲಾಖೆಯವರಿಗೆ ಮಸಲಾ ೪೦ ಕೋಟಿ ಲಾಭ ಬಂದಿದೆ. ಇದನ್ನು ಕೆಲಸ ಮಾಡಿದ ನಮಗೆ ಹಂಚಿ ಎನ್ನುತ್ತಾರೆ ನಮ್ಮ ಕಾರ್ಮಿಕರು. ನ್ಯಾಯವೇ! ಆದರೆ ರೈಲ್ವೆ ಇಲಾಖೆ ಕಂಪೆನಿಯಾಗಿದ್ದ ಪಕ್ಷದಲ್ಲಿ ಲಾಭದಲ್ಲಿ ೩೩ ಕೋಟಿ ವರಮಾನ ತೆರಿಗೆಯಾಗಿ ಹೋಗುತ್ತಿತ್ತು. ೭ ಕೋಟಿಯಲ್ಲಿ ನಮ್ಮ ಹಳೇ ಸಾಮಾನನ್ನು ಹೊಸ ಸಾಮಾನಿಗೆ ಮಾರ್ಪಡಿಸಲು ಸಾಕಷ್ಟು ಹಣವಿರು ತ್ತಿರಲಿಲ್ಲ. ಆಗ ನಮ್ಮ ಕಾರ್ಮಿಕರೂ ಈ ಹೆಚ್ಚು ಹಣ ಕೇಳುತ್ತಿದ್ದಿಲ್ಲ.

ನಮ್ಮ ಸರ್ಕಾರಕ್ಕೂ ಹೆಚ್ಚು ಹಣ ಬರುತ್ತಿತ್ತು. ಈ ಒಂದು ಮುಖ್ಯ ಅಂಶದಿಂದ, ಈ ಸಂಪಿನ ಭೀಷಣ ರೂಪು ಬಂದಿದೆ. ನಮ್ಮ ಕಾರ್ಮಿಕರಿಗೆ ಇದರಿಂದ ಕಷ್ಟವಿಲ್ಲಾ! ನಮ್ಮ ಸರ್ಕಾರಕ್ಕೆ ತಮ್ಮ ಘನತೆಯನ್ನು ಉಳಿಸಿಕೊಳ್ಳಬೇಕು ಎಂಬುವ ನ್ಯಾಯವಾದ ಹಂಬಲ. ಆದರೆ ನಮಗೆ ಅಧಿಕಾರಿಗಳಿಗೆ ತಲೆನೋವು. ನಾವು ನಾಲ್ಕಾರು ಅಧಿಕಾರಿಗಳು ರೈಲ್ವೆ ನಡೆಸಲು ಸಾಧ್ಯವೇ?

ರೈಲ್ವೆಗೆ ರಾಷ್ಟ್ರೀಕರಣ ಅಂತ ಹೆಸರಿಡುವುದು ಬೇಡ. ಅದು ಕಂಪೆನಿಯಾಗೇ ಇರಲಿ. ಸರ್ಕಾರ ಹೆಚ್ಚುಪಾಲುದಾರರಾಗಲಿ ಎಂದು ನಾನು ಹೇಳಿದರೆ ಯಾರೂ ಕೇಳುವುದಿಲ್ಲ!! ಎಂದು ಬಿಸುಸುಯ್ದರು.

"ನಿಮ್ಮ ಮಾತನ್ನು ದೇವರಾದರೂ ಕೇಳುತ್ತಾನೆ, ದೇವರು ನಮ್ಮ ಭಾರತದಲ್ಲಿ ಇನ್ನೂ ಇದ್ದರೆ" ಎಂದು ಅವರನ್ನು ಸಮಾಧಾನ ಪಡಿಸಿ ಹೊರಬಿದ್ದೆ.

—ಕುಮಾರ್.




ಲಾಲ್‌ಬಾಗ್‌ನಲ್ಲಿ : ನಾವು, ಅಥವಾ ನಮಗಿಂತ ಮುಪ್ಪಾದವರಿಗೇ ಲಾಲ್‌ಬಾಗ್ ವಿಹಾಸಲಾದಂತಿದೆಯಲ್ಲಾ! ನವ ಯುವಕರು ಏಕೆ ಬರುಲ್ಲವೋ?



**VITOFERRIN**




MYSORE INDUSTRIAL & TESTING LABORATORY LTD MALLESWARAM BANGALORE

# ವೈಟೋಫೆರಿನ್

## (ಆಧುನಿಕ ಶಕ್ತಿವರ್ಧಕ ಟಾನಿಕ್)

★ ಇದರಲ್ಲಿ "ಎ" "ಬಿ" ಮತ್ತು "ಡಿ" ಎಂಬ ವೈಟಮಿನ್ನುಗಳೂ, ಐರನ್, ಕ್ಯಾಲ್ಸಿಯಂ ಮುಂತಾದ ಲೋಹ ವಿಶೇಷಗಳೂ, ಶುದ್ಧಗೊಳಿಸಿದ ತಾಮ್ರವೂ, ಮತ್ತು ಮಾಲ್ಟ್ ಸಾರ, ಜೇನುತುಪ್ಪಗಳನ್ನು ಸೇರಿಸಿ ತಯಾರಿಸಿದ ಒಂದು ಅಮೃತ ಪಾನ. ಇದರಲ್ಲಿ ದೇಹಶಕ್ತಿಗೆ ಬೇಕಾದ ಸಕಲ ಔಷಧಗಳ ಸಮೂಹವೂ ಇದೆ. ಖಾಯಿಲೆಯಿಂದ ಎದ್ದವರಿಗೂ, ಬಸುರಿ ಬಾಣಂತಿಯರ ದೇಹದಾರ್ಢ್ಯಕ್ಕೂ ಇದು ಅತ್ಯುತ್ತಮವಾದ ಔಷಧ. ಸೇವಿಸಲು ಬಹಳ ರುಚಿಯಾಗಿಯೂ ಮತ್ತು ಮಧುರವಾಗಿಯೂ ಇದೆ. ★



ತಯಾರಕರು :

**ದಿ ಮೈಸೂರು ಇಂಡಸ್ಟ್ರಿಯಲ್ ಅಂಡ್ ಟೆಸ್ಟಿಂಗ್ ಲ್ಯಾಬೋರಟರಿ, ಲಿಮಿಟೆಡ್**

ಮಲ್ಲೇಶ್ವರಂ - - - ಬೆಂಗಳೂರು 3.

---

# ಕೊರವಂಜಿ

ಬಳೇಪೇಟೆ : : ಬೆಂಗಳೂರು 2

**ಬಿಡಿ ಪ್ರತಿ ಕೇವಲ ನಾಲ್ಕಾಣೆ**

ವಾರ್ಷಿಕ ಚಂದಾ: ಕೇವಲ 3 ರೂ.ಗಳು (ಅಂಚೆ ವೆಚ್ಚ ಸಹಿತ)

---

**ನಮ್ಮ ಹೊಸ ಮಾರಾಟಗಾರರು:**

**Sri H. R. SREENIVASAN,**
HOLALKERE.

**Sri T. BASATTAPPA,**
KOTTUR.

**Sri H. S. SURYANARAYANA,**
KADUR.

ರಸಿಕರಿಗೆ ಅಚ್ಚುಮೆಚ್ಚಾದುವು

# ಮೈಸೂರು ರೇಷ್ಮೆ ವಸ್ತ್ರಗಳು

## ಮಿತವ್ಯಯ- ಹಾಗೂ, ಸುರುಚಿ.

ಮೈಸೂರು ರೇಷ್ಮೆ — ಸಮಾಜದಲ್ಲಿ ಮೇಲ್ಮೆಯ ಕುರುಹು
ಮುತ್ಸಂಜೆಯಲ್ಲಿ ಅನುಪಮವಾದುದು



ಜಾರ್ಜೆಟ್, ಕ್ರೇಪ್,

ಜಾರ್ಜೆಟ್ ಮತ್ತು ಕ್ರೇಪ್ ಸೀರೆಗಳು

ಮನಸೆಳೆವ ಮಾದರಿಗಳು

ಇಂದಿನ ಅಂದದ ರಂಗುಗಳು.

---

ಸರ್ಕಾರಿ ರೇಷ್ಮೆ ನೇಯುವ ಕಾರ್ಖಾನೆ,

ಮೈಸೂರು

REG. NO. M. 4718 KORAVANJI AUG. 1951

**27-7-51ರಿಂದ ಅಮೋಘ ಪ್ರಾರಂಭ!**




— ಬೆಂಗಳೂರು —

# ಗೀತಾ ಮತ್ತು ಶ್ರೀ

ಮೈಸೂರು : ಚಾಮುಂಡೇಶ್ವರಿ ★ ಮಂಗಳೂರು : ನ್ಯೂ ಚಿತ್ರ

ಟಾಕೀಸುಗಳಲ್ಲಿ ಏಕಕಾಲದಲ್ಲಿ ಪ್ರದರ್ಶನಾರಂಭ.

## A TALLAM RELEASE

Printed by B. S. Iyengar, Bangalore City
Publisher—B. N. Gupta. Editor—M Sivaram.